# ಧನ್ಯಜೀವಿ

ಪ್ರೊ. ಎನ್. ಕೃಷ್ಣಸ್ವಾಮಿಗಳ ೮೦ನೆಯ ವರ್ಧಂತಿ ಸುಸ್ಮಾರಿಕೆ

SOUVENIR





# DHANYAJEEVI

PROF. N. KRISHNASWAMY

80th BIRTHDAY FELICITATION SOUVENIR

Prof. N. Krishnaswami Abhinandana Samithi, Bangalore

# ಧನ್ಯಜೀವಿ

## ಪ್ರೊ. ಎನ್. ಕೃಷ್ಣಸ್ವಾಮಿಯವರ
## 80ನೇ ವರ್ಧಂತಿ ಅಭಿನಂದನೆಯ ಸುಸ್ಮಾರಿಕೆ






ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ।
ಸ ಯತ್ ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ॥

- *ಭಗವದ್ಗೀತೆ (III-21)*

# *'DHANYAJEEVI'*

## Prof. N. Krishnaswamy
## Felicitation Souvenir

**Prof. N. Krishnaswamy Abhinandana Samithi**

**C/o. Swami Vivekananda Educational Society (Regd.)**

C.A.No.5A, 3rd Cross, 2nd Block, B.S.K. 1st Stage, Bangalore-560 050

Ph : 26679463, email : svvhs_1970@yahoo.co.in

Published by
Prof. N. Krishnaswamy Abhinandana Samithi
C/o. Swami Vivekananda
Educational Society (Regd.)
C.A.No. 5A, 3rd Cross, 2nd Block
Banashankari 1st Stage, Bangalore-560 050.
Ph : 26679463
e-mail : svvhs_1970@yahoo.co.in

Released on 6th August 2006



*Souvenir Committee*

**H. N. Somasundaram,** Editor
**M. B. S. Prakash,** Co-ordinator

*Members*

**B. S. Subramanya**
**C. S. Prasanna Kumar**
**H. V. Shankar**
**M. B. Balasubramanyan**
**Y. R. Gopala Krishna**



Cover design by
**Sushma Subramanyan**
**M. B. S. Prakash**

Printed at
**Sri Chamundeshwari Printers**
Bangalore - 560 050

## *Abhinandhana Samithi*

**S. N. Chandrashekar** - *President*
**G. T. Venkataramanaiah** - *Vice President*
**H. N. Somasundaram** - *Vice President*
**B. S. Subramanya** - *Secretary*
**K. N. Seetaram** - *Joint Secretary*
**Y. R. Gopala Krishna** - *Joint Secretary*
**M. B. Balasubramanyan** - *Treasurer*
**S. V. Srinivasa Rao** - *Member*
**Y. N. Rama Rao** - *Member*
**H. B. Channappa** - *Member*
**Neelattahalli Kasturi** - *Member*
**K. N. Ananda Theertha** - *Member*
**Bhaskar Mane** - *Member*
**B. S. Gundu Rao** - *Member*
**C. S. Prasanna Kumar** - *Member*
**H. V. Gowtham** - *Member*
**Eshwar Jois** - *Member*
**M. B. S. Prakash** - *Member*
**M. Nanjundaiah** - *Member*
**H. V. Shankar** - *Member*
**Shashi Ganesh** - *Member*
**Kum. Ranjani E. Jois** - *Member*

# ಮುನ್ನುಡಿ

**ಮುಂ**ಜಾನೆಯ ಮಂಜಿನ ಹನಿಯು ಯಾವ ಸದ್ದುಗದ್ದಲವಿಲ್ಲದೆ ಚೆಂದದ ಗುಲಾಬಿಯನ್ನರಳಿಸುವಂತೆ, ನಮ್ಮೊಡನೆಯೇ ಇದ್ದು, ಎಲ್ಲರಿಗೂ ಒಳ್ಳೆಯದನ್ನು ಮಾಡುತ್ತಾ, ಎಲ್ಲರನ್ನೂ ಆತ್ಮಭಾವನೆಯಿಂದ ಕಾಣುತ್ತಾ ಸಾರ್ಥಕಜೀವನ ನಡೆಸುತ್ತಿರುವ, ಕಿಟ್ಟಿಮೇಷ್ಟ್ರು ಎಂದೆ ಹಿರಿಯರು ಮಕ್ಕಳಾದಿಯಾಗಿ ಎಲ್ಲರಿಗೂ ಚಿರಪರಿಚಿತ ರಾಗಿರುವ ಪೂಜ್ಯ ಕೃಷ್ಣಸ್ವಾಮಿಯವರ ಎಂಬತ್ತನೆಯ ವರ್ಧಂತಿಯ ಅಭಿನಂದನೆಯ ಸಂದರ್ಭದಲ್ಲಿ ಸಮರ್ಪಿಸುತ್ತಿರುವ ಒಂದು ಪುಷ್ಪವೇ ಈ ಸಂಚಿಕೆ **'ಧನ್ಯಜೀವಿ'.**

ಕೃಷ್ಣಸ್ವಾಮಿ ಜುಲೈ 30, 1926ರಂದು ಬೆಂಗಳೂರಿನಲ್ಲಿ ಅಡ್ವೋಕೇಟ್ ನಂಜುಂಡಯ್ಯ-ಶಾರದಮ್ಮ ದಂಪತಿಗಳಿಗೆ ನಾಲ್ಕನೆಯ ಮಗುವಾಗಿ ಜನಿಸಿದರು. ಅದೊಂದು ದೈವಭಕ್ತ ಕುಟುಂಬ. ತಾಯಿತಂದೆಗಳಂತೆ ಮಕ್ಕಳೂ ಸರಳ, ನಿರ್ಮಲ, ಕಷ್ಟಜೀವನವನ್ನು ಹಸನ್ಮುಖದಿಂದ ಸ್ವೀಕರಿಸುವ ಪ್ರವೃತ್ತಿಯವರು.

ಕೃಷ್ಣಸ್ವಾಮಿ ಬಾಲ್ಯದಿಂದಲೂ ಪ್ರತಿಭಾವಂತರು. ವಿದ್ಯಾರ್ಥಿದೆಸೆಯಲ್ಲಿಯೆ ರಾಮಕೃಷ್ಣ ವಿವೇಕಾನಂದರ ಪ್ರಭಾವಕ್ಕೆ ಬಂದು ಅವರು ತಮ್ಮ ಗಾಯನದಿಂದ, ಸದ್ಗುಣಗಳಿಂದ ಎಲ್ಲರ ಕಣ್ಮಣಿಯಾಗಿದ್ದರು. ಬಡತನ ವಿದ್ದರೂ ಯಾವಾಗಲೂ 'ವಿಶೇಷ ಯೋಗ್ಯತೆ'ಯಲ್ಲಿ ಅವರು ಶಾಲಾ ವಿದ್ಯಾಭ್ಯಾಸವನ್ನು ಮುಗಿಸಿ, ನಂತರ ಸೆಂಟ್ರಲ್ ಕಾಲೇಜಿನಲ್ಲಿ ಎಂ.ಎಸ್‌ಸಿ. ಪದವಿಯನ್ನು ಪಡೆದರು. ಇದೇ ಸಮಯದಲ್ಲಿ ತಮ್ಮ ಶಾಲಾಕಾಲೇಜು ದಿನಗಳಲ್ಲಿಯೇ ಅವರು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ್ದರು. ಎಂ.ಎಸ್‌ಸಿ. ಪದವಿಯ ನಂತರ ವಿಜಯ ಕಾಲೇಜಿನಲ್ಲಿ ಅಧ್ಯಾಪಕರಾಗಿ ವೃತ್ತಿಜೀವನ ಪ್ರಾರಂಭಿಸಿದ ಕೃಷ್ಣಸ್ವಾಮಿ ಸಂಶೋಧನೆಯಲ್ಲಿ ಒಲವು ತೋರಿ, ಮಾನಸಿಕ ಆಸ್ಪತ್ರೆ (ನಿಮ್ಹಾನ್ಸ್) ಯಲ್ಲಿ ವಿಜ್ಞಾನಿಯಾಗಿ ವಿದ್ಯುನ್ಮಾನ ವೈದ್ಯಕೀಯ ವಿಭಾಗದಲ್ಲಿ ಸಂಶೋಧನಕಾರ್ಯ ಮಾಡಿದರು. ಮುಂದೆ ಅದೇ ಕ್ಷೇತ್ರದಲ್ಲಿ ರಕ್ಷಣಾ ಇಲಾಖೆಯನ್ನು ಪ್ರವೇಶಿಸಿ ಎಲ್.ಆರ್.ಡಿ.ಇ., ಡೀಪಾಸ್ (DIPAS) ಮುಂತಾದೆಡೆ ಕೆಲಸ ಮಾಡಿ ಕಡೆಯಲ್ಲಿ ಮತ್ತೆ ರಕ್ಷಣಾ ಇಲಾಖೆಯ ಶಿಕ್ಷಣಕ್ಷೇತ್ರಕ್ಕೆ ಬಂದು ಪುಣೆಯಲ್ಲಿ ಮಿಲಿಟರಿ ಇಂಜಿನಿಯರಿಗ್ ಕಾಲೇಜಿನಲ್ಲಿ (CME) ಪ್ರಾಧ್ಯಾಪಕರಾಗಿ ಕೆಲಸ ಮಾಡಿ ಸ್ವಯಂ ನಿವೃತ್ತಿ ಹೊಂದಿ 1982ರಲ್ಲಿ ಬೆಂಗಳೂರಿಗೆ ಹಿಂದಿರುಗಿದರು.

ಈ ವಿಜ್ಞಾನಿ-ಪ್ರಾಧ್ಯಾಪಕರು ಕೆಲಸ ಮಾಡಿದೆಡೆಯಲ್ಲೆಲ್ಲಾ ಸೃಜನಶೀಲತೆ, ಶ್ರದ್ಧೆ, ಶಿಸ್ತು ಮತ್ತು ಸಹೋದ್ಯೋಗಿಗಳೊಡನೆ ಗೌರವ ವಿಶ್ವಾಸಗಳು ಎದ್ದುಕಾಣುತ್ತಿತ್ತು. ಹಾಗೆಯೇ ಮನೆಯಲ್ಲಿಯೂ ಎಲ್ಲರಿಗೂ ಅಚ್ಚುಮೆಚ್ಚಾಗಿ ಕಿರಿಯರಿಗೆ ಗುರುವಾಗಿ, ಹಿರಿಯರಿಂದಲೂ ಗೌರವಿಸಲ್ಪಟ್ಟು, ಇವರಲ್ಲಿ ನಿರ್ಲಿಪ್ತತೆ, ಕಳಕಳಿಗಳು ಸಾಮರಸ್ಯ ಹೊಂದಿವೆಯೆಂದು ನಮಗೆ ಲೇಖನಗಳಿಂದ ವಿಶದವಾಗುತ್ತದೆ.

ಆದರೆ ಇದಕ್ಕಿಂತ ಮುಖ್ಯವಾದದ್ದು ಅವರ ಆಂತರಿಕ ಜೀವನ. ಅದು ಸತ್ಯನಿಷ್ಠೆಯ, ಪ್ರೇಮದ, ಕಾರ್ಯಶೀಲತೆಯ ಸಾಧನೆಯ ಜೀವನ. ಅದೊಂದು ಹೃದಯಸ್ಪರ್ಶಿ ಗೀತೆಯ ಗಾಯನ. ಅವರು ನಿಜವಾಗಿಯೂ ವೈಷ್ಣವ ಜನತೋ ಕೀರ್ತನೆಯ ವೈಷ್ಣವ. ರಾಮಕೃಷ್ಣ ಆಶ್ರಮದ ಭಕ್ತರಾಗಿ ಆ ಹಿನ್ನೆಲೆಯನ್ನು ಹೊಂದಿ, ವಿವೇಕಾನಂದ ಬಾಲಕಸಂಘದಲ್ಲಿ, ಆಶ್ರಮದ ಇತರ ಚಟುವಟಿಕೆಗಳಲ್ಲಿ ಭಾಗವಹಿಸುತ್ತಾ 'ಕಿಟ್ಟಿ ಮಾಸ್ಟರು' ಎಂದೇ ಹೆಸರು ಪಡೆದರು. ಇತರ ಸೇವಾ ಸಂಸ್ಥೆಗಳಲ್ಲಿಯೂ ಅವುಗಳ ಬೆಳವಣಿಗೆಯಲ್ಲಿ ಸಕ್ರಿಯ ಪಾತ್ರವಹಿಸಿ, ಉತ್ತಮಕಾರ್ಯ ನಿರ್ವಹಿಸಲು ಕಾರಣರಾಗಿದ್ದಾರೆ. ಈ ಅಂಶಗಳೇ ಲೇಖನಗಳಲ್ಲಿ ಸುಂದರವಾಗಿ ಮೂಡಿಬಂದಿವೆ.

ಭಜನೆ, ಕೀರ್ತನೆಗಳು ಕಿಟ್ಟಿ ಮಾಸ್ತರಿಗೆ ಜೀವನದ ಉಸಿರು. ಕೀರ್ತನೆಗಳನ್ನು ಹೇಳಿಕೊಡುವುದಲ್ಲದೆ, ಯಾರು ಕರೆದರೂ ಅಲ್ಲಿಗೆ ತಮ್ಮ ವೃಂದದೊಡನೆ ಹೋಗಿ ಭಕ್ತಿಯಿಂದ ಭಜನೆ ನಡೆಸಿಕೊಡುತ್ತಾರೆ. ಇಂದಿಗೂ ಎತ್ತರದ ದನಿಯಲ್ಲಿ ತನ್ಮಯತೆಯಿಂದ ಹಾಡುತ್ತಾರೆ. ತಾವೇ ಹಾಡುಗಳನ್ನು ರಚಿಸಿದ್ದಾರೆ. ಹಾಗೆಯೇ ಅವರ ಸಾಹಿತ್ಯಾಸಕ್ತಿಯೂ ಅಪಾರ. ಗಾಂಧಿ, ವಿನೋಬಾ ಮೊದಲಾದ ಮಹಾತ್ಮರು, ಐನ್‌ಸ್ಟೀನ್‌ನಂತಹ ವಿಜ್ಞಾನಿಗಳು — ಹೀಗೆ ವಿಶಾಲ ಆಸಕ್ತಿ ಹೊಂದಿ ಪುಸ್ತಕಗಳನ್ನು ಬರೆದಿದ್ದಾರೆ. ಈ ಸಂಗೀತ ಸಾಹಿತ್ಯಾಸಕ್ತಿ ಬಗ್ಗೆಯೂ ನಮ್ಮ ಲೇಖಕರು ಮನೋಜ್ಞವಾಗಿ ವಿವರಿಸಿದ್ದಾರೆ.

ಒಂದು ವಿಶೇಷವೇನೆಂದರೆ ಅವರು ಮಾಡಿದ 'ಪ್ರಾರ್ಥನಾ ಪ್ರವಾಸ'. ಒಂದಲ್ಲ ನಾಲ್ಕು ಬಾರಿ ಅವರು ಅಮೇರಿಕಾಕ್ಕೆ ಹೋಗಿ ವಿವೇಕಾನಂದ ಶಾಲೆಯ ಕಟ್ಟಡ, ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಪ್ರಾರ್ಥನೆ, ಕೀರ್ತನೆಗಳನ್ನು ಹಾಡಿ ನಿಧಿಸಂಗ್ರಹ ಮಾಡಿದರು. ಆದ್ದರಿಂದಲೇ ಅಂದಿನ ಅಧ್ಯಕ್ಷರಾಗಿದ್ದ ಡಾ. ಪಿ. ಎಸ್. ನಾರಾಯಣ ರಾಯರು ಈ ಕಟ್ಟಡದ ಪ್ರತಿ ಕಲ್ಲಿನ ಹಿಂದೆ ಒಂದು ಹಾಡು ಇದೆ ಎಂದು ಕಾವ್ಯಮಯವಾಗಿ ಹೇಳಿದ್ದಾರೆ.

ಈ ಸಂಚಿಕೆಯಲ್ಲಿ ಸ್ಥೂಲವಾಗಿ ಹೇಳಬಹುದಾದರೆ, ನಾಲ್ಕು ರೀತಿಯ ಸಮುದಾಯಗಳ ಸಹೃದಯರು ತಮ್ಮ ಅನುಭವಗಳನ್ನು ಹಂಚಿಕೊಂಡಿದ್ದಾರೆ. ಅವರ ಮನೆಯ ಬಂಧು ಬಳಗದವರು, ಬಾಲಕಸಂಘ, ಆಶ್ರಮ ಭಕ್ತರು ಮತ್ತು ವಿವೇಕಾನಂದ ಶಾಲೆ, ಸೇವಾಶ್ರಮದ ಸ್ನೇಹಿತರು, ಮೂರನೆಯದಾಗಿ ಗಾಂಧಿಭವನ ಮತ್ತು ಭಾರತೀಯ ವಿದ್ಯಾಭವನ ಗಾಂಧಿ ಅಧ್ಯಯನ ಕೇಂದ್ರದ ಮಿತ್ರರು, ಕಡೆಯದಾಗಿ ಇತರ ಸ್ನೇಹಿತರು — ವೃತ್ತಿಜೀವನದ ಸಹೋದ್ಯೋಗಿಯಾಗಿದ್ದವರು ಮುಂತಾದವರು. ಆದರೆ ಎಲ್ಲರೂ ವ್ಯಕ್ತಪಡಿಸಿರುವುದು ಒಂದೇ ಅಭಿಪ್ರಾಯ. ತಾವು ಒಬ್ಬ ವಿಶೇಷವ್ಯಕ್ತಿಯನ್ನು ಕಂಡು ಪರಿಚಯ ಹೊಂದಿ ಜೊತೆಗೆ ಕೆಲಸ ಮಾಡಿದ ಸಂತೋಷ. ಇದನ್ನೇ ತಮ್ಮ ಲೇಖನಗಳಲ್ಲಿ ವ್ಯಕ್ತಪಡಿಸಿದ್ದಾರೆ.

'ಸಂತರು ವಸಂತಋತುವಿನಂತೆ ಭೂಮಿಗೆ ಬರುತ್ತಾರೆ' ಎಂಬುದು ಶ್ರೀಶಂಕರ ವಾಕ್ಯ. ಇತರರಿಗೆ ಒಳ್ಳೆಯದನ್ನು ಮಾಡುವುದೇ ಅವರ ಗುರಿ. ಇದು ನಮ್ಮ ಕಿಟ್ಟಿ ಮಾಸ್ತರಿಗೆ ಬಹಳ ಚೆನ್ನಾಗಿ ಒಪ್ಪುತ್ತದೆ.

ತಮ್ಮ ಪ್ರಕೃತಿಗೆ ಸಹಜವೆಂಬಂತೆ ಕಿಟ್ಟಿ ಮಾಸ್ತರ್ ಈ ಸಂಚಿಕೆಯಿಂದ ಮತ್ತು 80ನೇ ವರ್ಧಂತಿ ಅಭಿನಂದನೆಯಿಂದ ಬರುವ ಧನವನ್ನು ಸ್ವಾಮಿ ವಿವೇಕಾನಂದ ಶೈಕ್ಷಣಿಕ ಸಂಸ್ಥೆ ಮತ್ತು ಶ್ರೀ ವಿವೇಕಾನಂದ ಸೇವಾಶ್ರಮಗಳಿಗೆ ವಿನಿಯೋಗಿಸಲು ನಿರ್ಧರಿಸಿ ಸಂಪೂರ್ಣ **ಅಪರಿಗ್ರಹ** ಆಚರಿಸಿದ್ದಾರೆ.

ಈ ಹಿನ್ನೆಲೆಯಲ್ಲಿ **'ಧನ್ಯಜೀವಿ'** ಸ್ಮರಣ ಸಂಚಿಕೆಯನ್ನು ನಿಮಗೆ ಸಮರ್ಪಿಸುತ್ತಿದ್ದೇವೆ. ನಮ್ಮ ಮೇಲೆ ಅಪಾರ ವಿಶ್ವಾಸದಿಂದ ರಾಮಕೃಷ್ಣ ಮಠ ಮತ್ತು ಮಿಷನ್ನಿನ ಹಿರಿಯ ಸ್ವಾಮಿಗಳು, ತಮ್ಮ ಅಮೂಲ್ಯ ಸಂದೇಶಗಳನ್ನು ಕಳುಹಿಸಿದ್ದಾರೆ. ಅವರಿಗೆ ಅಭಿನಂದನಾ ಸಮಿತಿಯು ಚಿರಋಣಿ.

ಈ ಸಂಸ್ಮರಣ ಸಂಚಿಕೆಯನ್ನು ಸುಂದರವನ್ನಾಗಿ ಮಾಡಿರುವ ನಮ್ಮ ಲೇಖಕರಿಗೂ, ತಮ್ಮ ಸ್ಥಳದಾನ, ಜಾಹೀರಾತು, ಆರ್ಥಿಕ ನೆರವಿನಿಂದ ಬೆಂಬಲಿಸಿರುವ ಎಲ್ಲ ಸಹೃದಯರಿಗೂ, ಈ ಸಂಚಿಕೆ ಹೊರಬರಲು ಶ್ರಮಿಸಿರುವ ಕಾರ್ಯಕರ್ತರಿಗೂ ಅಂದವಾಗಿ ಮುದ್ರಿಸಿರುವ ಶ್ರೀಚಾಮುಂಡೇಶ್ವರಿ ಮುದ್ರಣಾಲಯದ ವರಿಗೂ ನಮ್ಮ ಕೃತಜ್ಞತಾಪೂರ್ವಕ ಶುಭೇಚ್ಛೆಗಳು.

ದಿನಾಂಕ
6.8.2006

**ಎಚ್. ಎನ್. ಸೋಮಸುಂದರಂ**
ಸಂಪಾದಕರು

**ಎಸ್. ಎನ್. ಚಂದ್ರಶೇಖರ್**
ಅಭಿನಂದನಾ ಸಮಿತಿ ಅಧ್ಯಕ್ಷರು

# ಪರಿವಿಡಿ

* * * * * * *




**Swami Smarananda**
General Secretary
Ramakrishna Math
P.O. Belur Math, West Bengal

# MESSAGE

*I am glad to learn from the letter of 26th June 2006 that the 80th Birth Anniversary celebration of Prof. N. Krishnaswamy will be celebrated on 6th August 2006.*

*Prof. Krishnaswamy, popularly known as 'Kitty Master', has been a long-time friend of the Swamis of the Ramakrishna Order. With multi-sided proficiencies, he has endeared himself to all those who came in touch with him. Above all, his concern for the poor and downtrodden is noteworthy.*

*May the Lord, by His infinite grace, keep 'Kitty Master' with us to complete the Vedic age-span of 100 years – Sharadah shatam.*

*With best wishes*

*July 5th, 2006* ***Swami Smarananda***






**ಸ್ವಾಮಿ ಸುರೇಶಾನಂದ**
ಶ್ರೀರಾಮಕೃಷ್ಣ ಕುಟೀರ
ಬಿಳಿಗಿರಿರಂಗನ ಬೆಟ್ಟ

## ಸಂದೇಶ

ಶ್ರೀ ಕೃಷ್ಣಸ್ವಾಮಿಯವರ 80ನೆಯ ಹುಟ್ಟುಹಬ್ಬವನ್ನು ಅವರ ಹಿತೈಷಿಗಳು, ಶಿಷ್ಯವೃಂದದವರು ಆಚರಿಸುತ್ತಿರುವುದು, ಸಮಾರಂಭದಲ್ಲಿ ಪಾಲ್ಗೊಳ್ಳಲು ನನಗೂ ಅವಕಾಶ ಸಿಕ್ಕಿರುವುದು ಅತ್ಯಂತ ಸಂತೋಷವನ್ನುಂಟುಮಾಡಿದೆ. ಈ ಸದವಕಾಶ ವನ್ನು ಕಳೆದುಕೊಳ್ಳದಿರುವುದಕ್ಕಾಗಿ, ವಿಚಾರ ತಿಳಿದಂದಿನಿಂದಲೂ ದಿನನಿತ್ಯ ಕುತೂಹಲದಿಂದ ಕ್ಯಾಲೆಂಡರ್ ನೋಡುತ್ತಿದ್ದೇನೆ, ವಯೋಧರ್ಮಕ್ಕನುಸಾರವಾಗಿ ಮರೆವು ಕಾಣಿಸಿಕೊಳ್ಳುತ್ತಿರುವುದರಿಂದ!

ಸಮರ್ಥರಾದ ಅಭಿಮಾನಿಗಳು, ಶಿಷ್ಯರುಗಳಿರುವುದರಿಂದ ಸಮಾರಂಭ ಯಶಸ್ವಿಯಾಗುವುದು ಖಂಡಿತ.

ಜುಲೈ 30, 2006

**ಸ್ವಾಮಿ ಸುರೇಶಾನಂದ**





**Swami Harshananda**
Ramakrishna Math
Bull Temple Road, Basavanagudi
Bangalore - 560 019

# MESSAGE

*Vivekananda has exhorted us to leave a mark behind, for having come to this world. Great men like him have left so many such marks behind that humanity is grateful to them for generations. However, if we – his disciples and followers – can leave a mark that is cherished by our contemporaries, even that will be a great achievement. And, Sri N. Krishnaswamy – our dear Kitty Meshtru – has done exactly that, by leaving a mark of love and affection in our minds and hearts, by his sweet and noble personality.*

*My hearty congratulations to him on this happy occasion of his 80th birthday with prayers for many more returns!*

*July 11, 2006* ***Swami Harshananda***






**ಸ್ವಾಮಿ ಗೌತಮಾನಂದ**
ಅಧ್ಯಕ್ಷರು, ಶ್ರೀರಾಮಕೃಷ್ಣ ಮಠ
ಚೆನ್ನೈ

# ಅಭಿನಂದನೆಗಳು

ನನ್ನ ಪ್ರಿಯ ಪ್ರೊ. ಎನ್. ಕೃಷ್ಣಸ್ವಾಮಿ (ಕಿಟ್ಟಿ ಮೇಷ್ಟು) ಅವರ 80 ವರ್ಷದ ವರ್ಧಂತಿ ಉತ್ಸವ ನಡೆಯುತ್ತಿರುವುದು ಬಹಳ ಸಂತೋಷಕರ ವಿಷಯ. ಪ್ರೊ. ಕೃಷ್ಣಸ್ವಾಮಿ ಅವರಂತಹ ವ್ಯಕ್ತಿಗಳು ನಮ್ಮ ದೇಶಕ್ಕೆ ದೊಡ್ಡ ಅಲಂಕಾರ ಪ್ರಾಯರು. ಅಂಥವರಿಂದ ನಮ್ಮ ಸಮಾಜದ ಬಾಲಕರು, ಯುವಕರು ಮತ್ತು ಹಿರಿಯರು ಎಲ್ಲರೂ ಪ್ರೇರಣೆ ಪಡೆದು ಉತ್ತಮ ಪ್ರಜೆಗಳಾಗಿ ತಮ್ಮ ಆಧ್ಯಾತ್ಮಿಕ ಜೀವನದಲ್ಲೂ ಮತ್ತು ನಮ್ಮ ದೇಶದ ಅಭಿವೃದ್ಧಿ ಜೀವನದಲ್ಲೂ ಮುಂದುವರೆಯುವಂತೆ ಪ್ರೋತ್ಸಾಹಿತರಾಗುತ್ತಾರೆ ಎಂಬುದು ನಿಶ್ಚಯ.

ಸ್ವಾಮಿ ವಿವೇಕಾನಂದರೂ, ಮಹಾತ್ಮಾಗಾಂಧಿಯವರೂ ಎದುರು ನೋಡಿದ ಭವ್ಯ ಭಾರತದ ಆದರ್ಶ ಪ್ರಜೆಗಳ ಗುಂಪಿಗೆ ಸೇರುವಂತಹವರು ಪ್ರೊ. ಕೃಷ್ಣಸ್ವಾಮಿ ಅವರು. ಅವರಂತಹ ಹಲವಾರು ಸದಾಚಾರ ಸಂಪನ್ನ ಪ್ರೊಫೆಸರ್‌ಗಳು ನಮ್ಮ ದೇಶದಲ್ಲಿ ಉದಿಸಿ ಅವರ ವೈಭವವನ್ನು ಪ್ರಪಂಚವೆಲ್ಲಾ ಅರಿಯುವಂತೆ ಮಾಡಲಿ, ಅಂತಹ ಆಶೀರ್ವಾದವನ್ನು ಶ್ರೀರಾಮಕೃಷ್ಣರು, ಶಾರದಾದೇವಿಯವರು ಮತ್ತು ಸ್ವಾಮಿ ವಿವೇಕಾನಂದರು ನಮಗೆ ಕರುಣಿಸಲಿ ಎಂದು ಪ್ರಾರ್ಥಿಸುತ್ತೇನೆ.

ಜುಲೈ 8, 2006

**ಸ್ವಾಮಿ ಗೌತಮಾನಂದ**






**ಸ್ವಾಮಿ ಜಗದಾತ್ಮಾನಂದ**
ಅಧ್ಯಕ್ಷರು, ಶ್ರೀರಾಮಕೃಷ್ಣ-ಶಾರದಾಶ್ರಮ
ಪೊನ್ನಂಪೇಟೆ, ಕೊಡಗು ಜಿಲ್ಲೆ

## ಸಂದೇಶ

ತಾನು ಒಳ್ಳೆಯವನಾಗಿದ್ದುಕೊಂಡು ಇತರರಿಗೆ ಒಳಿತನ್ನು ಮಾಡುವುದೇ ಧರ್ಮದ ಸಾರ ಎಂದರು ಸ್ವಾಮಿ ವಿವೇಕಾನಂದರು.

ಗುರುಕೃಪೆ ಸತ್ಸಂಗ ಮತ್ತು ಸಾಧನಾದಿಗಳಿಂದ ಈ ಆದರ್ಶವನ್ನು ಮೈಗೂಡಿಸಿಕೊಳ್ಳಲು ಯತ್ನಿಸುತ್ತ ನಿಸ್ಪೃಹ ಜೀವನವನ್ನು ನಡೆಸುತ್ತಿರುವ ಧೀರರು ಶ್ರೀ ಕಿಟ್ಟಿಮೇಷ್ಟ್ರು.

ಅವರಿಗೆ ನನ್ನ ಹಾರ್ದಿಕ ಅಭಿನಂದನೆಗಳು.

ಜುಲೈ 4, 2006 **ಸ್ವಾಮಿ ಜಗದಾತ್ಮಾನಂದ**






**Swami Bhajanananda**
Ramakrishna Math
Howrah, West Bengal
INDIA

# MESSAGE

*I am very glad to know from your letter of 30.5.2006 that you are going to celebrate the 80th birthday of our Kitty Master. His is a dedicated life, and he deserves all felicitation. Please convey my respectful regards to him*

*With love and best wishes.*

*8th June, 2006*

*Yours affectionately*
***Swami Bhajanananda***






**Swami Raghaveshananda**
Secretary
Ramakrishna Mission Ashrama
Fort, Belgaum

# MESSAGE

*It is a matter of great pleasure to know that in connection with the completion of 80 years of noble life of Prof. Krishnaswamy, a souvenir will be published.*

*The message of Sri Ramakrishna-Mother & Swamiji is universal Love. To spread this message Sri N. Krishnaswamy is untiringly working through his devotional music and selfless service. He is a role model to devotees and students to understand how one should live to imbibe, philosophy of Swami Vivekananda.*

*May Sri Ramakrishna bestow His choicest blessings on this Gupta Sannyasi on this occasion is my sincere prayer.*

*July 6, 2006* ***Swami Raghaveshananda***





**ಸ್ವಾಮಿ ನಿತ್ಯಸ್ಥಾನಂದ**
ಅಧ್ಯಕ್ಷರು
ಶ್ರೀರಾಮಕೃಷ್ಣ ಆಶ್ರಮ, ಮೈಸೂರು

## ಸಂದೇಶ

ಶ್ರೀಯುತ ಎನ್. ಕೃಷ್ಣಸ್ವಾಮಿಯವರ ಎಂಬತ್ತು ವರ್ಷಗಳ ತುಂಬುಜೀವನದ ಸವಿನೆನಪಿಗಾಗಿ ಬೆಂಗಳೂರಿನ ಸ್ವಾಮಿ ವಿವೇಕಾನಂದ ಶೈಕ್ಷಣಿಕ ಸಂಸ್ಥೆ (ರಿ.) ಒಂದು ಸ್ಮರಣಸಂಚಿಕೆಯನ್ನು ಪ್ರಕಟಿಸುತ್ತಿರುವುದು ತುಂಬ ಸಂತೋಷದ ವಿಷಯ. ರಾಮಕೃಷ್ಣ ಆಶ್ರಮದ ಭಕ್ತವಲಯದಲ್ಲಿ 'ಕಿಟ್ಟಿ ಮಾಸ್ಟರ್' ಎಂದೇ ಚಿರಪರಿಚಿತರಾಗಿರುವ ಶ್ರೀಯುತ ಕೃಷ್ಣಸ್ವಾಮಿಯವರು ವಯಸ್ಸಿನಲ್ಲಿ ಹೇಗೋ ಹಾಗೆಯೇ ಜ್ಞಾನದಲ್ಲಿ, ತಮ್ಮ ಸಾಧನೆಯಲ್ಲಿ, ಸಾಮಾಜಿಕ ಕಳಕಳಿಯಲ್ಲಿ ನಮಗೆಲ್ಲ ಹಿರಿಯರು. ಅವರದು ಬಹುಮುಖ ಪ್ರತಿಭೆ. ವೃತ್ತಿಯಲ್ಲಿ ವಿಜ್ಞಾನಿಗಳಾಗಿದ್ದಾಗಿನಿಂದಲೂ ಆಶ್ರಮದ ನಿಕಟ ಭಕ್ತರಾಗಿ, ಯುವಜನರಿಗೆ ಅನನ್ಯ ಸ್ಫೂರ್ತಿಯಾಗಿ ಅನ್ಯಾದೃಶ ಜೀವನವನ್ನು ನಡೆಸಿದ್ದಾರೆ.

ನಿವೃತ್ತರಾದ ನಂತರ ಸ್ವಾಮಿ ವಿವೇಕಾನಂದ ಶೈಕ್ಷಣಿಕ ಸಂಸ್ಥೆಯ ಕಾರ್ಯಕಲಾಪಗಳಲ್ಲಿ ಎರಡೂವರೆ ದಶಕಗಳಿಗಿಂತಲೂ ಮಿಗಿಲಾಗಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡಿರುವುದೇ ಅಲ್ಲದೆ ಅನೇಕ ಇತರೆ ಸೇವಾ ಸಂಸ್ಥೆಗಳ ಅಭಿವೃದ್ಧಿಯಲ್ಲೂ ತಮ್ಮ ಕಾಳಜಿ ತೋರಿದ್ದಾರೆ. ಈಗಲೂ ಅವರು ಅಧ್ಯಯನ ಹಾಗೂ ಬರವಣಿಗೆಯಲ್ಲಿ ಸೃಜನಾತ್ಮಕವಾಗಿ ಕ್ರಿಯಾಶೀಲರಾಗಿದ್ದಾರೆ. ಅವರ ಜೀವನ ನಮಗೆಲ್ಲರಿಗೂ ಉತ್ತಮ ಜೀವನ ನಡೆಸಲು ಪ್ರೇರಣೆ ನೀಡಲಿ ಎಂದು ಹಾರೈಸುತ್ತೇನೆ.

ಈ ಶುಭ ಸಂದರ್ಭದಲ್ಲಿ ಅವರಿಗೆ ಭಗವಂತ ಉತ್ತಮ ಆರೋಗ್ಯಾದಿಗಳನ್ನು ನೀಡಲಿ ಎಂಬುದೇ ನಮ್ಮ ಪ್ರಾರ್ಥನೆ. ಈ ಸಂದರ್ಭದಲ್ಲಿ ಹೊರಬರುತ್ತಿರುವ ಮೌಲಿಕವಾದ ಸ್ಮರಣಸಂಚಿಕೆಗೆ ಹಾರ್ದಿಕ ಶುಭಾಶಯಗಳನ್ನು ಕೋರುತ್ತೇನೆ.

ಜುಲೈ 15, 2006 **ಸ್ವಾಮಿ ನಿತ್ಯಸ್ಥಾನಂದ**

**ದಿನಾಂಕ 6.8.2006ರಂದು ಪ್ರೊ. ಎನ್. ಕೃಷ್ಣಸ್ವಾಮಿಯವರಿಗೆ ಅವರ ಸಾರ್ಥಕ 80ನೆಯ ವರ್ಧಂತಿಯ ನೆನಪಿನ ಅಭಿನಂದನೆಯಲ್ಲಿ ರಾಮಕೃಷ್ಣ ಆಶ್ರಮದ ಭಕ್ತರು, ಸ್ವಾಮಿ ವಿವೇಕಾನಂದ ಶೈಕ್ಷಣಿಕ ಸಂಸ್ಥೆ ಮತ್ತು ಶ್ರೀ ವಿವೇಕಾನಂದ ಸೇವಾಶ್ರಮಗಳ ಕಾರ್ಯಕರ್ತರು ಮತ್ತು ಹಿತೈಷಿಗಳು, ಗಾಂಧಿ ಸ್ಮಾರಕ ಸಂಸ್ಥೆಗಳವರು, ಬಂಧುವರ್ಗ ಮತ್ತು ಇತರ ಮಿತ್ರರು ಅರ್ಪಿಸಿದ**

# ಬಿನ್ನವತ್ತಳೆ

ಆತ್ಮಬಂಧು ಕೃಷ್ಣಸ್ವಾಮಿಯವರೇ,

ನಾವು, ರಾಮಕೃಷ್ಣಾಶ್ರಮದ ಭಕ್ತರು, ಸ್ವಾಮಿ ವಿವೇಕಾನಂದ ಶೈಕ್ಷಣಿಕ ಸಂಸ್ಥೆ, ಶ್ರೀ ವಿವೇಕಾನಂದ ಸೇವಾಶ್ರಮಗಳ ಕಾರ್ಯಕರ್ತರು, ಹಿತೈಷಿಗಳು, ಗಾಂಧಿ ಸ್ಮಾರಕ ಸಂಸ್ಥೆಗಳವರು, ಬಂಧುವರ್ಗ, ಮುನ್ನಿನ ಸಹೋದ್ಯೋಗಿಗಳು, ಸ್ನೇಹರಂಗ ಮತ್ತು ನಡಿಗೆ ಮಿತ್ರರು — ಹೀಗೆ ನಿಮ್ಮ ಅಪಾರ ಅಭಿಮಾನಿ ಸಮುದಾಯವು, ನಿಮ್ಮ ಸಾರ್ಥಕ 80 ವರ್ಷಗಳನ್ನು ಪೂರೈಸಿದ ನೆನಪಿನ ಅಭಿನಂದನೆಯಲ್ಲಿ ನಮ್ಮ ಹೃದಯಭಾವನೆಗಳನ್ನು ವ್ಯಕ್ತಪಡಿಸಲು ಈ ಬಿನ್ನವತ್ತಳೆಯನ್ನು ತಮಗೆ ಸಮರ್ಪಿಸುತ್ತಿದ್ದೇವೆ.

ನೀವು, ನಿಜಾರ್ಥದಲ್ಲಿ ನ್ಯಾಯವಾದಿಗಳಾಗಿದ್ದ ನಂಜುಂಡಯ್ಯ-ಸಾಧ್ವಿ ಶಾರದಮ್ಮ ದಂಪತಿಗಳ ನಾಲ್ಕನೆಯ ಮಗುವಾಗಿ ಜನಿಸಿ ಸುಸಂಸ್ಕೃತ ತುಂಬು ಕುಟುಂಬದಲ್ಲಿ ಬೆಳೆದು ಬಂದಿದ್ದೀರಿ. ಆದ್ದರಿಂದಲೇ ಜೀವನದ ಕಷ್ಟಕಾರ್ಪಣ್ಯಗಳನ್ನರಿತ ನೀವು ನೊಂದವರಿಗೆ ಯಾವಾಗಲೂ ಸಾಂತ್ವನ ನೀಡುವಿರಿ. ಶಾರದೆಯ ಕುಟುಂಬದವರಾದ ನೀವು ಬಾಲ್ಯದಿಂದಲೇ ಪ್ರತಿಭಾವಂತರಾಗಿದ್ದು ಅತ್ಯುನ್ನತ ದರ್ಜೆಯಲ್ಲಿ ಶಾಲಾ ವಿದ್ಯಾಭ್ಯಾಸವನ್ನು ಪೂರ್ಣಗೊಳಿಸಿ, ನಂತರ ಭೌತಶಾಸ್ತ್ರದಲ್ಲಿ ಎಂ.ಎಸ್ಸಿ., ಪದವಿ ಗಳಿಸಿದುದು ನಿರೀಕ್ಷಿತವಾದರೂ ಸಂತೋಷದ ವಿಚಾರ.

ವಿದ್ಯಾರ್ಥಿದೆಸೆಯಲ್ಲಿಯೇ ನೀವು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದುದು, ನೀವು ಮತ್ತು ಸಹೋದರ ಪಾಪು (ಸುಬ್ಬರಾವ್) ಸ್ವಾತಂತ್ರ್ಯ ಗೀತೆಗಳನ್ನು ಹಾಡಿದುದು ನಮ್ಮಲ್ಲಿ ಅನೇಕರು ಹಿರಿಯರಾದವರಿಗೆ ನೆನಪಿನಲ್ಲಿ ಹಚ್ಚಹಸಿರಾಗಿದೆ.

ಎಂ.ಎಸ್ಸಿ. ನಂತರ ವೃತ್ತಿಜೀವನ ಕೈಗೊಂಡ ನೀವು ಬೆಂಗಳೂರಿನ ವಿಜಯ ಕಾಲೇಜು ವಿದ್ಯಾರ್ಥಿಗಳಿಂದ, ಸಹೋದ್ಯೋಗಿಗಳಿಂದ ಒಬ್ಬರು ಶ್ರೇಷ್ಠ ಶಿಕ್ಷಕರೆಂದು ಹೆಸರು ಪಡೆದಿರಿ. ನಂತರ ನಿಮ್ಹಾನ್ಸ್‌ನಲ್ಲಿ, ರಕ್ಷಣಾ ಇಲಾಖೆಯಲ್ಲಿ ನೀವು ವಿಜ್ಞಾನಿಯಾಗಿ, ಪ್ರಾಧ್ಯಾಪಕರಾಗಿಯೂ ಕಾರ್ಯನಿರ್ವಹಿಸಿ ಆವಿಷ್ಕಾರಗಳು, ವಿನೂತನ ಉಪಕರಣ ಸೃಷ್ಟಿ, ಒಳ್ಳೆಯ ಕೆಲಸದಿಂದ ದೇಶಕ್ಕೆ ಸೇವೆಸಲ್ಲಿಸಿರುವಿರಿ.

ರಾಮಕೃಷ್ಣಾಶ್ರಮ ಹಿನ್ನೆಲೆ ಹೊಂದಿರುವ ನಿಮ್ಮ ಆಂತರಿಕ ಜೀವನವನ್ನು ನಾವು ಖಂಡಿತ ಅರಿಯಲಾರೆವು. ವಿದ್ಯಾರ್ಥಿದೆಸೆಯಲ್ಲಿಯೇ ರಾಮಕೃಷ್ಣಾಶ್ರಮದ ಮಲ್ಲೇಶ್ವರದಲ್ಲಿ ಇದ್ದ ವೇದಾಂತ

ಕಾಲೇಜಿಗೆ ಹೋಗುತ್ತಾ, ಭಜನೆ ಕೀರ್ತನೆಗಳನ್ನು ಹಾಡುತ್ತಾ, ಕಲಿಯುತ್ತಾ ನಿಮ್ಮ ಜೀವನವೂ ಆ ದಿಕ್ಕಿನಲ್ಲಿ ಹರಿಯಿತು. ಪೂಜ್ಯ ಸ್ವಾಮಿ ತ್ಯಾಗೀಶಾನಂದರ ಆಶೀರ್ವಾದ ಮತ್ತು ಪೂಜ್ಯ ಸ್ವಾಮಿ ಯತೀಶ್ವರಾನಂದರಿಂದ ಮಂತ್ರದೀಕ್ಷೆ ಪಡೆಯುವ ಭಾಗ್ಯ ನಿಮ್ಮದಾಗಿತ್ತು. ನಿಮ್ಮ ಶಾಂತ ಸ್ವಭಾವ, ವಿವೇಕ, ಮಾನವೀಯತೆಯನ್ನು ಎಲ್ಲರೂ ಒಂದಲ್ಲ ಒಂದು ಸಲ ಅನುಭವ ಪಡೆದಿದ್ದಾರೆ. ಅಜಾತಶತ್ರುವಾದ ನೀವು ಹೆಜ್ಜೆ ಹೆಜ್ಜೆಯಲ್ಲಿಯೂ ತ್ಯಾಗ ಪ್ರೇಮ ಔದಾರ್ಯ ಕ್ಷಮೆಗಳನ್ನು ಆಚರಿಸಿ ನಮಗೆಲ್ಲ ದೀವಿಗೆಯಾಗಿರುವುದು ನಮ್ಮ ಸುಕೃತವೆಂದು ಭಾವಿಸುತ್ತೇವೆ.

ದೈವದತ್ತವಾದ ಕಂಠಸಿರಿಗೆ ತನ್ಮಯತೆಯು ಸೇರಿ ನಿಮ್ಮ ಗಾಯನ ಮನಸ್ಸಿಗೆ ಸಾಂತ್ವನ ನೀಡುವುದು. ನೀವು ಅರ್ಥ ಹೇಳಿ ಭಜನೆ ಮಾಡುವುದರಿಂದ ಅದು ಅರ್ಥವತ್ತಾಗಿ ಇರುವುದು. ಈ ಕ್ಷೇತ್ರದಲ್ಲಿಯೇ ನೀವು ಶ್ರಮವಹಿಸಿ ಸಾವಿರಾರು ಜನಕ್ಕೆ, ವಿವೇಕಾನಂದ ಬಾಲಕ ಸಂಘ ಮತ್ತು ಇತರೆಡೆ ಮಕ್ಕಳಿಗೆ ದೇವರನಾಮ ಹೇಳಿಕೊಟ್ಟಿರುವುದು ಒಂದು ಅಸದೃಶ ಸೇವೆ. ಆದ್ದರಿಂದಲೇ ನಿಮ್ಮ ಶಿಷ್ಯರು ಯಾವಾಗಲೂ ಕರೆಯುವ ಪ್ರಿಯ ನಾಮಾಂಕಿತ 'ಕಿಟ್ಟಿ ಮೇಷ್ಟು', ಈಗ ಅದೇ ಹೆಸರು ಎಲ್ಲರಲ್ಲಿಯೂ ರೂಢಿಯಾಗಿದೆ.

ನಿಮ್ಮ ಅಮೂಲ್ಯ ಅನುಭವವು ನೀವು ರಚಿಸಿರುವ ಹತ್ತಾರು ಸುಂದರ ಕೃತಿಗಳಲ್ಲಿ ಮೂಡಿಬಂದಿದೆ. 'ಮಹಾತ್ಮ' ಒಂದು ಉದಾಹರಣೆ. ನೀವು ವಿಜ್ಞಾನಿಯಾಗಿ ವೈಜ್ಞಾನಿಕ ಕೃತಿಗಳನ್ನು ರಚಿಸಿರುವುದೇ ಅಲ್ಲದೆ ವಿಜ್ಞಾನ-ವೇದಾಂತವನ್ನು ಚರ್ಚಿಸುವುದರಲ್ಲಿಯೂ ಆಸಕ್ತಿ ತೋರಿದ್ದೀರಿ. ಈ ಸಾಹಿತ್ಯಸೇವೆ ಅವಿರತವಾಗಿ ನಡೆದಿದೆ. ಇದು ಇನ್ನೂ ಮುಂದುವರಿಯಲಿ.

ಅನೇಕ ಸ್ವಯಂಸೇವಾಸಂಸ್ಥೆಗಳೊಡನೆ ಸಂಪರ್ಕಹೊಂದಿರುವ ನೀವು ಆ ಸಂಸ್ಥೆಗಳು ಬೆಳೆಯಲು ಉತ್ತಮಕಾರ್ಯ ಮಾಡಲು ಶ್ರಮಿಸುತ್ತಿರುವಿರಿ. ತನುಮನಧನವನ್ನು ಇದಕ್ಕಾಗಿ ಅರ್ಪಿಸುತ್ತಿರುವಿರಿ. ವಿವೇಕಾನಂದ ಶಾಲೆ ಕಟ್ಟಡಕ್ಕಾಗಿ ನೀವು ಪ್ರಾರ್ಥನಾ ಪ್ರವಾಸಗಳನ್ನು ಕೈಗೊಂಡಿರಿ. ಆದ್ದರಿಂದಲೆ "ಈ ಕಟ್ಟಡದ ಪ್ರತಿಕಲ್ಲಿನ ಹಿಂದೆ ಒಂದು ಹಾಡು ಇದೆ" ಎಂದು ಅಂದಿನ ಅಧ್ಯಕ್ಷರಾಗಿದ್ದ ಡಾ. ಪಿ. ಎಸ್. ನಾರಾಯಣರಾಯರು ಕಾವ್ಯಮಯವಾಗಿ ಹೇಳಿದ್ದಾರೆ. ಹಾಗೆಯೇ ಶ್ರೀ ವಿವೇಕಾನಂದ ಸೇವಾಶ್ರಮದೊಡನೆಯೂ ನಿಕಟಸಂಪರ್ಕ ಇರಿಸಿಕೊಂಡಿರುವುದು, ಗಾಂಧಿ ಸ್ಮಾರಕ ಸಂಸ್ಥೆಗಳು, ಇತರ ಅನೇಕ ಸಮುದಾಯಗಳೊಡನೆ ಸಂಬಂಧ ಇರುವುದು ನಮ್ಮ ಭಾಗ್ಯ.

ದಿವ್ಯತ್ರಯರು ಬೋಧಿಸಿದ ತ್ಯಾಗ ಸೇವೆಗಳನ್ನು, ಜೀವನದ ಆಧಾರವಾಗಿ ಮಾಡಿಕೊಂಡು ಭಜನೆ-ಕೀರ್ತನೆಗಳಿಂದ ಜೀವನವೇ ಗೀತವಾಗಿರುವ ನಿಮ್ಮ ಧನ್ಯಜೀವನಕ್ಕೆ ನಮಿಸುತ್ತಾ ದೇವರು ನಿಮಗೆ ಆಯುರಾರೋಗ್ಯಗಳನ್ನು ಕೊಡಲಿ ಎಂದು ನಾವು ಭಕ್ತಿಯಿಂದ ಪ್ರಾರ್ಥಿಸುತ್ತೇವೆ.

ಶುಭೇಚ್ಛೆ ಮತ್ತು ಪ್ರಣಾಮಗಳೊಡನೆ

ನಿಮ್ಮ ಶ್ರೇಯೋಕಾಂಕ್ಷಿಗಳು

**ಸದಸ್ಯರು, ಅಭಿನಂದನಾ ಸಮಿತಿ**



ಶ್ರೀ ಕೃಷ್ಣ ಭಾಗವತರು



ತಂದೆ-ತಾಯಿ ಶ್ರೀ ನಂಜುಂಡಯ್ಯ, ಶ್ರೀಮತಿ ಶಾರದಮ್ಮನವರು



ಗೆಳೆಯ ರಾಮಮೂರ್ತಿಯೊಡನೆ (1940)






ಯುವಕ ಕಿಟ್ಟಿ



ವಿಜಯಕಾಲೇಜಿನಲ್ಲಿ ಉಪನ್ಯಾಸಕರು



ರಕ್ಷಣಾ ಇಲಾಖೆಯಲ್ಲಿ
(ಮೇಜರ್ ಜನರಲ್ ಸ್ಯಾಮ್‌ಸನ್‌ರೊಡನೆ)

CM K



'ವಿವೇಕಾನಂದ ವಿದ್ಯಾಶಾಲೆ'; ಮಕ್ಕಳ ಪ್ರಾರ್ಥನೆ
ಶ್ರೀ ಕೃಷ್ಣಸ್ವಾಮಿಯವರು ಹಿಂದೆ ಶಾಲೆಗೆ
ಕಾರ್ಯದರ್ಶಿಯಾಗಿದ್ದು ಈಗ ಅಧ್ಯಕ್ಷರಾಗಿದ್ದಾರೆ



'ವಿವೇಕದೃಷ್ಟಿ' ಆಸ್ಪತ್ರೆಯಲ್ಲಿ
ಡಾ. ತಿರುಮಲಾಚಾರ್‌ರವರಿಂದ ಕಣ್ಣು ಪರೀಕ್ಷೆ;
ಶ್ರೀ ಕೃಷ್ಣಸ್ವಾಮಿಯವರು
ಶ್ರೀ ವಿವೇಕಾನಂದ ಸೇವಾಶ್ರಮದ ಅಧ್ಯಕ್ಷರು



ಆಶ್ರಮದ ಸ್ವಾಮಿಗಳೊಂದಿಗೆ



ಭಜನೆ, ಕೀರ್ತನೆಗಳಲ್ಲಿ ತನ್ಮಯತೆ



ಭಾರತೀಯ ವಿದ್ಯಾಭವನದಲ್ಲಿ
ಪುಸ್ತಕ ಬಿಡುಗಡೆಯ ಸಮಾರಂಭ
ಡಾ. ಯು. ಆರ್. ಅನಂತಮೂರ್ತಿಯವರಿಂದ



ಕಿಟ್ಟಿ ಮಾಸ್ಟರು ಶಿವಾನಂದಾಶ್ರಮದ
ಸ್ವಾಮಿ ಚಿದಾನಂದರ 80ನೆಯ ಜನ್ಮದಿನದ
ಸತ್ಸಂಗದಲ್ಲಿ ಭಾಗವಹಿಸಿದ್ದರು. ಸ್ವಾಮೀಜಿ
ಮಾಲಾರ್ಪಣೆ ಮಾಡಿ ಆಶೀರ್ವದಿಸಿದರು.

# ಧನ್ಯಜೀವಿ

✍ ಬಾ. ಶೇ. ಶ್ರೀವತ್ಸನ್
ಮುಖ್ಯೋಪಾಧ್ಯಾಯರು
ಸ್ವಾಮಿ ವಿವೇಕಾನಂದ ವಿದ್ಯಾಶಾಲೆ
(ಹಿರಿಯ ಪ್ರಾಥಮಿಕ ವಿಭಾಗ)

ಧನ್ಯಜೀವಿಗಳು ಯಾರು ಗೊತ್ತೇ
ಅವರೇ ನಮ್ಮೆಲ್ಲರ ಕಿಟ್ಟಿ ಮಾಸ್ಟರ್!
ನೋಡಲಿಕ್ಕಿವರು ಸಾಮಾನ್ಯರು,
ಆದರಿವರು ಅಪೂರ್ವ ಅಸಾಮಾನ್ಯರು

ಪರಮಹಂಸರ ತತ್ತ್ವ ಪರಿಪಾಲಕರು
ಗಾಂಧಿಪಥದಲ್ಲಿ ನಡೆವ ಧೀಮಂತರು
ಸೇವೆಯ ಸಾಕಾರಮೂರ್ತಿಗಳು
ಇವರಿಗೆ ಬೇಕಿಲ್ಲ ಕೀರ್ತಿ, ಪ್ರತಿಷ್ಠೆಗಳು

ಸರಳ ಸಂಪನ್ನತೆಯೇ ಇವರ ವ್ಯಕ್ತಿತ್ವ
ಅದುವೇ ನಮ್ಮೆಲ್ಲರಿಗು ಆದರ್ಶ ತತ್ತ್ವ
ಸರ್ವ ಭೇದಗಳಿಗತೀತರಿವರು
ಸರ್ವ ಸಮತಾಭಾವದ ಸಂಕೇತ ಇವರು

ನಮ್ಮ ಶಾಲೆಯ ಭವ್ಯಶಿಲ್ಪಿಗಳಿವರು
ಇಲ್ಲಿರುವ ನಾವೇ ಭಾಗ್ಯಶಾಲಿಗಳು
ಸಾಹಿತ್ಯ ಸಂಗೀತ ವಿಶಾರದರಿವರು
ಭಕ್ತಿಗೀತೆಗಳ ಮಧುರ ಗಾಯಕರು

ಅರ್ಪಿಸುವ ಧನ್ಯಜೀವಿಗೆ ಭಕ್ತಿ ಕುಸುಮಾಂಜಲಿ
ಬೆಳಗುವೆವು ನಿಮಗೆ ಧನ್ಯ ದೀಪಾಂಜಲಿ
ದೈವ ಕರುಣಿಸಲಿ ಇವರಿಗೆ ಆಯುರಾರೋಗ್ಯ
ಶತಾಯುಷಿಗಳಾಗಿ ಬಾಳಲಿ ಈ ದಿವ್ಯಚೇತನ

ಹರಸುತಿರಿ ನೀವು ನಮ್ಮನು ಎಂದೆಂದು
ಸೇವೆಯೇ ಜೀವನದ ಗುರಿಯಾಗಿರಲಿ ಎಂದು
ನಿಮ್ಮ ಬಾಳಸಿರಿ ಸದಾ ದಿವ್ಯ ಜ್ಯೋತಿಯಾಗಿರಲಿ
ಅದುವೆ ಸರ್ವರಿಗೂ ರಕ್ಷೆ। ಶ್ರೀರಾಮರಕ್ಷೆ

# ಕೃಷ್ಣಸ್ವಾಮಿಗಳ ಶುಕ್ಲಗುಣಗಳು

ಸ್ವಾಮಿ ಸುರೇಶಾನಂದ
ಶ್ರೀರಾಮಕೃಷ್ಣ ಕುಟೀರ, ಬಿಳಿಗಿರಿರಂಗನ ಬೆಟ್ಟ

**ಶ್ರೀ** ಕೃಷ್ಣಸ್ವಾಮಿಯವರು (ಕಿಟ್ಟಿ ಮಾಸ್ತರರು) ನನಗಿಂತ ವಯಸ್ಸಿನಲ್ಲಿ, ತಿಳಿವಳಿಕೆಯಲ್ಲಿ, ಜ್ಞಾನದಾನ ಮಾಡುವಲ್ಲಿ, ಇನ್ನೂ ಅನೇಕ ರೀತಿಯಲ್ಲಿ ಹಿರಿಯರು. ನನ್ನ ಜೀವನದುದ್ದಕ್ಕೂ ನಾನು ಅನೇಕ ಅನೇಕ ವಿಶಿಷ್ಟವಾದ ವ್ಯಕ್ತಿಗಳನ್ನು ಕಂಡಿದ್ದೇನೆ. ಅವರಲ್ಲಿ ಕಿಟ್ಟಿ ಮಾಷ್ಟ್ರು ಅಗ್ರ ಪಂಕ್ತಿಯಲ್ಲಿರುವವರು, ನನ್ನ ಮಟ್ಟಿಗೆ. ಮನಸ್ಸಿನ ಪಾರ ದರ್ಶಕತೆ (Transparency) ಅವರಲ್ಲಿ ಪರಿಪೂರ್ಣತೆ ಹೊಂದಿದೆ ಎನ್ನಬಲ್ಲೆ. ಮಾತನಾಡುವಾಗ ಅವರಲ್ಲಿ ಎಂದೂ ಮುಚ್ಚುಮರೆಯಿಲ್ಲ. ಕೃತಿಯಲ್ಲಿ ಕೂಡ. ಅಂತಹ ಕೆಲವು ಪ್ರಸಂಗಗಳನ್ನಿಲ್ಲಿ ಓದುಗರ ಮುಂದಿರಿಸಲು ಇಚ್ಛಿಸುತ್ತೇನೆ. ನಾನು ಅವರಿಂದ ಅದಕ್ಕೆ ಅನುಮತಿ ಕೇಳಿಲ್ಲ. ಕೇಳಬೇಕಿಲ್ಲ ಎನಿಸುತ್ತದೆ.

ಆಗಿನ್ನೂ ನಾನು ಬೆಂಗಳೂರಿನ ರಾಮಕೃಷ್ಣ ಆಶ್ರಮದ ಬ್ರಹ್ಮಚಾರಿ. ಬಸವನಗುಡಿಯ ಮುಂದೆ ಧಾರ್ಮಿಕ ಸಂಪ್ರದಾಯದಂತೆ ಕಡ್ಲೆಕಾಯಿ ಪರಿಶೆ. ಆಶ್ರಮದಲ್ಲಿ ರಾತ್ರಿ ಊಟವಾದ ಮೇಲೆ ಪೂಜ್ಯ ಯತೀಶ್ವರಾನಂದಜಿಯವರು ಊರಲ್ಲಿರದಿದ್ದಾಗ ರಾತ್ರಿತರಗತಿಗೆ ರಜಾ. ಹೋಗಿ ಪರಿಶೆ ನೋಡಿ ಕಡ್ಲೆಕಾಯಿ ಸವಿಯುವ ಚಪಲ. ಜತೆಗಾರರಿರ ಬೇಕಲ್ಲ. ಕಿಟ್ಟಿಯನ್ನು ಕೇಳಿಕೊಂಡೆ. ಯಾರಾದರೂ ಕೇಳಿ ದಲ್ಲಿ ಅವರ ಒತ್ತಾಯಕ್ಕೆ ಬಂದೆ ಎಂದು ಸಮಜಾಯಿಷಿ ಹೇಳುವುದಕ್ಕೆ. ಕಡ್ಲೆಕಾಯಿಗೆ ಕಾಸು ಕೊಡುವುದಕ್ಕೂ ಎನ್ನಿ! ನಮ್ಮಿಬ್ಬರ ಮಧ್ಯೆ ಎಷ್ಟು ಆತ್ಮೀಯತೆ ಬೆಳೆದಿತ್ತೆಂದರೆ ಒಬ್ಬರನ್ನೊಬ್ಬರು ಏಕವಚನದಲ್ಲೇ ಸಂಬೋಧಿಸುತ್ತಿದ್ದೆವು.

ಇನ್ನೂ ಕಡ್ಲೆಕಾಯಿ ಗಾಡಿಗಳ ಸಾಲು ಬಂದಿಲ್ಲ. ಕಿಟ್ಟಿಯ ಕಣ್ಣು ರಸ್ತೆ ಪಕ್ಕದಲ್ಲಿ ಮಸಾಲೆ ವಡೆ ಕಾಯಿಸುವ ದೃಶ್ಯದತ್ತ ಹೋಯಿತು. ನಿಂತೇಬಿಟ್ಟ. ಖರೀದಿಯೂ ಆಯ್ತು. ಸಾಕಷ್ಟು ಪ್ರಮಾಣದಲ್ಲಿ. ಏನು ಕಿಟ್ಟಿ ಇದು ಅನಾರೋಗ್ಯ (unhygienic)ಕರವಾದದ್ದು. ರಸ್ತೆಪಕ್ಕದಲ್ಲಿರುವ ಪದಾರ್ಥ. ಇದನ್ನೆಲ್ಲ ನಾವು ತಿನ್ನುವುದು ಹೇಗೆ ಎಂದೆ. "ಇದು ಸಂಪೂರ್ಣ ಆರೋಗ್ಯಕರವಾದದ್ದು. ಈ ವಡೆ 200 ಡಿಗ್ರಿ ಕಾದ ಎಣ್ಣೆಯಲ್ಲಿ ಬೆಂದಿದ್ದು. ಯಾವ ಸಾಂಕ್ರಾಮಿಕ ಜೀವಿಗಳೂ ಬದುಕಿರಲು ಸಾಧ್ಯವಿಲ್ಲ" ಎನ್ನುತ್ತಾ ಅಲ್ಲೇ ತಿನ್ನಲು ಆರಂಭಿಸಿದ. ಸಾಲದ್ದಕ್ಕೆ ಅವರು ವಿಜ್ಞಾನದ ಮೇಸ್ಟ್ರು ಬೇರೆ! ನನ್ನ ಆತ್ಮಸಂಯಮದ ಪರೀಕ್ಷೆ ನಡೆಯುತ್ತಲೇ ಘಮ ಘಮ ವಾಸನೆ ಬರುತ್ತಲೇ ಇತ್ತು. ಬಸವನಗುಡಿ ರಸ್ತೆ ತಿರುಗಿ ಜನಸಂದಣಿ ಕಡಿಮೆ ಇರುವ ಗವಿಪುರಂ ರಸ್ತೆ ಸೇರಿದಮೇಲೆ "ಕಿಟ್ಟಿ, ನನಗೆ ವಡೆ ತಿನ್ನುವ ಆಸೇಂತ ತಿಳ್ಕೋಬೇಡ. ಅದನ್ನು ಹೇಗೆ ಮಾಡ್ತಾರೇಂತ ತಿಳ್‌ಕೋಳ್‌ಬೇಕು. ಎಲ್ಲಿ ಒಂದು ಅರ್ಧ ವಡೆ ಕೊಡು" ಎಂದೆ. ಯಾರಾದರೂ ಅರ್ಧ ವಡೆ ಕೊಡ್ತಾರೆಯೇ? ಎರಡು ವಡೆ ನನ್ನ ಕೈ ಸೇರಿತು. ವಿರೋಧ ವ್ಯಕ್ತಪಡಿಸುತ್ತ (ಬಾಯಿಂದ!) ಕೈಗೆ ತೆಗೆದುಕೊಂಡು ಸವಿಯಲು ಪ್ರಾರಂಭಿಸಿದೆ. ಬಿಸಿಬಿಸಿಯಾಗಿ ರುಚಿಯಾಗಿತ್ತು. ಅದೂ ಅಲ್ಲದೆ ನಾನು ಮೊತ್ತಮೊದಲ ಬಾರಿಗೆ ಬೆಳ್ಳುಳ್ಳಿ ಹಾಕಿದ ವಡೆ ತಿಂದದ್ದು! ಅವರ ಆಗಿನ ಗವೀಪುರದ ಮನೆಯ ವರೆಗೂ ಅವರಂತೆಯೇ ವಡೆ ಸವಿಯುತ್ತಾ ಹೋಗಿ ಹಿಂತಿರುಗಿದೆ.

ಎಂದಿನಂತೆ ಒಂದು ದಿನ ಆಶ್ರಮದ ಗೇಟಿನ ಹೊರಗಡೆ ಕಟ್ಟೆಯಲ್ಲಿ ಹೀಗೆ ಮಾತು ಪ್ರಾರಂಭ. "ಕಿಟ್ಟಿ ನೀನು ಇತ್ತ ಸಂನ್ಯಾಸಿಯೂ ಆಗಿಲ್ಲ. ಅತ್ತ ಗೃಹಸ್ಥನೂ ಆಗಿಲ್ಲ. ಹೀಗಿದ್ದರೆ ಎಂದಾದರೊಂದು ದಿನ ಅಂಥವರು ಬ್ರಹ್ಮರಾಕ್ಷಸರಾಗುತ್ತಾರೆ ಅಂತ ಶಾಸ್ತ್ರಗಳಲ್ಲಿ ಹೇಳಿದೆ ಯಂತೆ. ನೀನು ನನ್ನ ಆಪ್ತಮಿತ್ರ. ಈ ವಿಷಯ ನನ್ನನ್ನು ಚಿಂತೆಗೀಡುಮಾಡಿದೆ" ಎಂದೆ. ಪ್ರತಿಕ್ರಿಯೆ ಸ್ವಾರಸ್ಯವೂ ತಾತ್ತ್ವಿಕವೂ ಆಗಿತ್ತು. ಮೊದಲು ಅವನ ಮೂಲ ಶೈಲಿಯಲ್ಲಿ "ನಾನು ಬ್ರಹ್ಮರಾಕ್ಷಸ ಆಗ್ತೇನೆ. ಚೆನ್ನಾಗಿರುತ್ತೆ, ಮರದ ಮೇಲೆ ಕುಳಿತುಕೊಂಡು ಎಲ್ಲರನ್ನೂ ನೋಡ ಬಹುದು" ಎಂದ. ಸ್ವಲ್ಪ ಹೊತ್ತಾದ ಮೇಲೆ, "ನೋಡು,

ಆಶ್ರಮ ಸೇರಬೇಕಾದರೆ ನನಗೆ ಮೊದಲು ಈ ಜೀವನ ದಲ್ಲಿ ಜಿಗುಪ್ಸೆ (ಬೇಜಾರು) ಬರಬೇಕು. ಎರಡನೆಯದಾಗಿ ಸಂನ್ಯಾಸಿ ಆದರೆ ನಾನು ಇನ್ನೂ ಉತ್ತಮನಾಗುತ್ತೇನೆ ಎನ್ನುವ ಭರವಸೆ ಇರಬೇಕು. ನನಗೆ ಅವೆರಡೂ ಇಲ್ಲ. ಮತ್ತ್ಯಾಕೆ ನಾನು ಆಶ್ರಮ ಸೇರಬೇಕು?" ಎಂಬ ಸ್ಥಿತಪ್ರಜ್ಞನ ಭಾಷೆಯ ಉತ್ತರ ಬಂತು. "ನಿವೃತ್ತರಾಗಸ್ಯ ಗೃಹಂ ತಪೋವನಂ" ಎಂಬ ಮಾತು ಜ್ಞಾಪಕಕ್ಕೆ ಬಂತು. ಎಡೆಬಿಡದ ಹಾಸ್ಯ, ಒಬ್ಬರನ್ನೊಬ್ಬರು ರೇಗಿಸುವುದು — ಇವೇ ನಮ್ಮ ಮಾತುಗಳ ಮುಖ್ಯಾಂಶ. ಅದರಲ್ಲೂ ಶ್ರೀ ಪ್ರಭುಶಂಕರ, ಶ್ರೀ ರಾಮಚಂದ್ರನ್ ಸೇರಿಕೊಂಡರೆ ಇಂತಹ ಅನರ್ಥಗರ್ಭಿತ ಮಾತುಗಳಿಗಂತೂ ಕೊರತೆಯೇ ಇರುತ್ತಿರಲಿಲ್ಲ.

ಏನೋ ಒಂದು ವೃತ್ತಪತ್ರಿಕೆಯ ವರ್ತಮಾನ. ಅದು ಹೀಗಂತೆ ಎಂದೆ. ಅದು ವೃತ್ತಪತ್ರಿಕೆಯಲ್ಲಿ ವರದಿಯೇ ಆಗಿಲ್ಲ ಎಂದ. ಯಾವ ವಾದದಿಂದಲೂ ಗೆಲ್ಲುವುದಕ್ಕೆ ಸಾಧ್ಯವಿಲ್ಲ ಎಂದು ಗೊತ್ತಿದ್ದರೂ ಮರುದಿನ ಆ ಪತ್ರಿಕೆಯ ಪ್ರತಿಯನ್ನು ಸಂಪಾದಿಸಿ ರಾತ್ರಿ ತೋರಿಸಿದೆ. ಓದಿ ಸುಮ್ಮನಾಗಲೇಬೇಕು ಎಂದುಕೊಂಡಿದ್ದೆ. ನಮ್ಮ ಮನೆಗೆ ಬಂದ ಪತ್ರಿಕೆಯಲ್ಲಿ ಇದು ಪ್ರಕಟವಾಗಿಲ್ಲ ಎಂದ. ಎರಡೂ ಒಂದೇ ದಿನದ 'ದಿ ಹಿಂದು' ಪತ್ರಿಕೆಗಳೇ ಎನ್ನುವುದು ಸ್ವಾರಸ್ಯ.

ಆಶ್ರಮದ ಹಳೆಯ ಗೇಟಿಗೆ ಬರೀ ಉದ್ದುದ್ದ ಕಬ್ಬಿಣದ ಸಲಾಕೆಗಳನ್ನು ಜೋಡಿಸಿದ ಮಾತು ಒಮ್ಮೆ ಬಂತು. ಈ ಮಾತು ಯಾಕೆ ಬಂತು ಎನ್ನುವುದು ಜ್ಞಾಪಕವಿಲ್ಲ. ಈ ಗೇಟಿಗೆ ಬೀಗ ಹಾಕೋದಿಲ್ವೆ ಎಂದು ಕೇಳಿದ. ಬೀಗ ಹಾಕಿ ಏನು ಪ್ರಯೋಜನ? ಕಳ್ಳರು ಬೇಕಾದರೆ ಸಲಾಕೆಗಳ ನಡುವೆ ತೂರಿ ಬರಬಹುದು ಎಂದೆ. ಅಲ್ಲಿಂದ ವಾದ ಆರಂಭವಾಗಿ ಅಂದಿನ ಮಾತೆಲ್ಲ ಅದರಲ್ಲೇ ಅವಸಾನ. ಅದು ಸಾಧ್ಯವೇ ಇಲ್ಲ ಎಂದು ಮೊದಲಾಗಿ ನನ್ನನ್ನು ತುಂಬ ರೇಗಿಸುವುದರಲ್ಲಿ ಪರ್ಯವಸಾನವಾಯಿತು. ನಾನು ಸುಮ್ಮನಿರುವುದಕ್ಕಾಗುತ್ತದೆಯೇ? ಮರುದಿನ ಪ್ರಾರಂಭಿಸಿದೆ. ಒಂದು ವೇಳೆ ನಾನು ಸಲಾಕೆಗಳ ಮಧ್ಯೆ ಗೇಟಿನಿಂದ ಹೊರಗೆ ಹೋದರೆ ನನಗೇನು ಬಹುಮಾನ ಎಂದೆ. ತಟಕ್ಕನೆ ಬಂತು ಉತ್ತರ ಐದು ರೂಪಾಯಿ ಎಂಬುದಾಗಿ. ಅದು ಈಗಿನ ಐವತ್ತು ರೂ.ಗಳಿಗೂ ಹೆಚ್ಚು. ಮುಂದೆ ಇನ್ನೇನಾದರೂ ವಾದ ಮಾಡಿ ಹಣ ಕೊಡದೇ ಹೋದರೆ? ಅದಕ್ಕಾಗಿ ಇನ್ನೂ ಒಬ್ಬ ಬ್ರಹ್ಮಚಾರಿಗಳನ್ನು ಜತೆಗೆ ಕರೆದುಕೊಂಡು ಹೋಗಿ ಗೇಟ್ ಸಲಾಕೆ ಮಧ್ಯೆ ತೂರಿಕೊಂಡು ಹೊರಗೆ ಹೋದೆ. ಮರುದಿನವೆ ಐದು ರೂ. ಕೈಗೆ ಬಂತು. ಅದರ ಮರುದಿನವೇ ಶ್ರೀಗುರು ಮಹಾರಾಜರಿಗೆ ಬಂಗಾಳಿ ಪಾಯಸದ ನೈವೇದ್ಯ. ಕಿಟ್ಟಿ ಮುಖ್ಯ ಅತಿಥಿ. ಅಂದು ನನಗೆ ಬಹಳ ಹೆಮ್ಮೆಯ ದಿನ. ಪಾಯಸಕ್ಕಿಂತಲೂ ಕಿಟ್ಟಿಯನ್ನು ಒಂದು ಸಲವಾದರೂ ಸೋಲಿಸಿಬಿಟ್ಟೆನಲ್ಲಾ ಎಂದು. ನಾನು ಮುಂಜಾಗರೂಕತೆ ಯಿಂದ ಹಿಂದಿನ ದಿನ ರಾತ್ರಿಯೇ ಒಂದು ಸಲ ಆತ ಮನೆಗೆ ಹೋದಮೇಲೆ trial ನೋಡಿಬಿಟ್ಟಿದ್ದೆ ಅನ್ನಿ!

ನಾನು ಸಂನ್ಯಾಸಿಯಾಗಿ ಬೇಲೂರು ಮಠದಿಂದ ಹಿಂದುರಿಗಿದಾಗ ನನ್ನನ್ನು ಕಂಡು ಬಗ್ಗಿ ನಮಸ್ಕಾರ ಮಾಡಿದ ಮೊದಲಿಗರಲ್ಲೊಬ್ಬರು ಕಿಟ್ಟಿ ಮಾಸ್ಟರ್! ಅಂದಿನಿಂದ ನನ್ನನ್ನು 'ನೀವು' ಎಂದು ಸಂಬೋಧನೆ ಪ್ರಾರಂಭ! ಆದರೆ ಅವರೆಂದೂ ನನ್ನೊಡನೆ ಭಕ್ತರಂತೆ ನಡೆದುಕೊಂಡಿಲ್ಲ. ಕಾರಣ ನಾನು ಗುರುವಿನಂತೆ ವರ್ತಿಸಿದ್ದೂ ಇಲ್ಲ.

ಹಲವಾರು ವರ್ಷಗಳ ಹಿಂದೆ. ಅವರಿಗೆ ಆಗ ಎಪ್ಪತ್ತು ವರ್ಷ ವಯಸ್ಸಿರಬಹುದು. ವಿವಿಧ ತರಕಾರಿಗಳ ಕುರಿತು ಮಾತು ನಡೆಯುತ್ತಿತ್ತು. ಮಂಗಳೂರು ಕಡೆ ಮಾರುದ್ದ ಅಲಸಂದೆ ಕಾಯಿ ಸಿಗುತ್ತದೆ ಎಂದೆ. ಬಲಗೈ ಎತ್ತಿ ಎಡಗೈಯ ಮೂಲಕ ಅಳತೆ ತೋರಿಸಿದೆ. ಅದು ಸಾಧ್ಯವಿಲ್ಲ ಎಂದು ಅವರ ವಾದ. ಅದಂತಿರಲಿ. ಮುಂದೆ ನಮ್ಮಿಬ್ಬರ ಭೇಟಿ ಸಮಯದಲ್ಲಿ "ಸ್ವಾಮಿಗಳೆ ಮಂಗ ಳೂರಲ್ಲಿ (ಕೈ ಎತ್ತಿ ತೋರಿಸಿ) ಇಷ್ಟಿಷ್ಟು ಉದ್ದದ ಅಲಸಂದೆ ಸಿಗುತ್ತೆ ಅಲ್ವಾ" ಅಂತ ರೇಗಿಸುತ್ತಲೇ ಇದ್ದರು. ಸುಮಾರು ಎರಡು ಮೂರು ವರ್ಷಗಳ ಹಿಂದೆ ಮಂಗಳೂರಿಗೆ ಹೋಗಿದ್ದೆ. ಆಶ್ರಮದಲ್ಲೇ ಆ ಉದ್ದುದ್ದದ ಅಲಸಂದೆ ಬೆಳೆಸಿದ್ದರು. ಅಂದು ರಾತ್ರಿಯೇ ಸ್ವಾಮಿಗಳೊಬ್ಬರು ಬೆಂಗ ಳೂರಿಗೆ ಹೋಗುವವರಿದ್ದರು. ಅಧ್ಯಕ್ಷರ ಅನುಮತಿ ಪಡೆದು ಒಂದಷ್ಟು ಅಲಸಂದೆಕಾಯಿ ಪ್ಯಾಕ್ ಮಾಡಿ ಅವರ ಕೈಯಲ್ಲಿ ಕಿಟ್ಟಿ ಮಾಸ್ಟರ್‌ಗೆ ತಲುಪಿಸಿದೆ. ನಾಸ್ತಿಕರು ಪ್ರತ್ಯಕ್ಷ ಒಂದೇ ಪ್ರಮಾಣ ಎನ್ನುತ್ತಾರಲ್ಲ. ಈಗಲಾದರೂ

ಬಾಯಿ ಮುಚ್ಚಿಕೊಂಡು ನನ್ನ ವಾದವನ್ನು ಒಪ್ಪಲೇಬೇಕು ಎಂದುಕೊಂಡು ಮುಂದಿನ ಸಲ ಬೆಂಗಳೂರಲ್ಲಿ ಅವರ ಮನೆಯಲ್ಲೇ ಅಲಸಂದೆ ಕಾಯಿಯ ವಿಚಾರ ಎತ್ತಿದೆ. ಅದಕ್ಕಾಗಿಯೇ ಅಲ್ಲಿಯವರೆಗೆ ಹೋಗಿದ್ದೆ ಎನ್ನಿ. ಹೌದು, ಸ್ವಾಮಿಗಳೇ ತಂದುಕೊಟ್ಟರು. ಬಹಳ ರುಚಿಯಾಗಿತ್ತು. ಬೆಂದಾಗ ಬೆಣ್ಣೆಯಂತಿತ್ತು ಎಂದು ಹೊಗಳಿದರು. ಗುಟ್ಟಾಗಿಯೇ ಬೆನ್ನು ತಟ್ಟಿಕೊಂಡೆ. ಮರುಕ್ಷಣವೇ ಬಂತು ರಾಮಬಾಣ. "ಆದ್ರೆ ಸ್ವಾಮಿಗಳೇ. ಅದು ನೀವು ಹೇಳಿ ದಷ್ಟು ಉದ್ದ ಇರಲಿಲ್ಲ." (ಕೈಯೆತ್ತಿ ನಾನು ಹಿಂದೆ ತೋರಿಸಿದ್ದಕ್ಕಿಂತ ಒಂದು ಇಂಚು ಕಡಿಮೆ ತೋರಿಸಿ "ಅದು ಇಷ್ಟೇ ಉದ್ದ ಇದ್ದದ್ದು" ಎಂದರು!) ಆಗ ನನಗಾದ ಅನುಭವ ಆಂಗ್ಲ ಭಾಷೆಯಲ್ಲಿ ಹೇಳುವುದಾದರೆ crest fallen.

ಕೃಷ್ಣಸ್ವಾಮಿಯವರ (ನಾನು ಅವರನ್ನು ಹೀಗೆ ಸಂಬೋಧಿಸಿದ್ದು ಬಹಳ ಅಪರೂಪ.) 80ನೇ ಜನ್ಮದಿನ ದಂದು ಈ ಸ್ಮರಣಿಕೆ ಪ್ರಕಟವಾಗುತ್ತಿದೆ. ನನಗೂ ವಯಸ್ಸಾಗಿದೆ. ಆದರೆ ನಮ್ಮ ನಮ್ಮಲ್ಲಿನ ವಾದ-ಸಂವಾದ-ತರ್ಕ-ಜಲ್ಪ-ವಿತಂಡ ಅಂತೆಯೇ ಇದೆ. ಮುಂದೆಯೂ ಹಾಗೇ ಇರುತ್ತದೆ. ಅವರು ನನ್ನತ್ತ ಎಸೆಯುವ ಬಾಣದ ಮೊನಚು ಸ್ವಲ್ಪವೂ ಮೊಂಡಾಗಿಲ್ಲ. ಹಾಗೇ ಇದ್ದರೆ ಚೆನ್ನ. ನಮ್ಮ ಬಾಂಧವ್ಯ ಪರಾಕಾಷ್ಠೆಯನ್ನು ಮುಟ್ಟಿದೆ. ಶ್ರೀ ಡಿ.ವಿ.ಜಿ.ಯವರು ತಮ್ಮ ಕೃತಿಯಲ್ಲಿ ಹೀಗೆ ಬರೆದಿದ್ದಾರೆ:

*ವಾಣಿ ಮಂತ್ರ ತಂತ್ರ ಸಿದ್ಧಿಗಳ ಸಾಕ್ಷ್ಯಗಳೇಕೆ*
*ಮನಗಾಣಿಸಲು ನಿನಗೆ ದೈವದದ್ಭುತವ ।*
*ಮನುಜರೊಳಗಾಗಾಗ ತೋರ್ವ ಮಹನೀಯ ಗುಣ*
*ಅನುವಾದವಾತ್ಮನದು ಮಂಕುತಿಮ್ಮ ॥*

ಅವರು ಇಂತಹವರನ್ನು ನೋಡಿಯೇ ಈ ಪದ್ಯ ಬರೆದಿರಬಹುದು ಎನ್ನಿಸುತ್ತದೆ. ಕೃಷ್ಣಸ್ವಾಮಿಯವರ ಜತೆ ಯಲ್ಲಿ ಶ್ರೀಮಾನ್ ಡಿ.ವಿ.ಜಿ.ಯವರನ್ನು ಯಾವುದೋ ಕಾರ್ಯದ ನಿಮಿತ್ತ ಭೇಟಿ ಮಾಡಲು ಹೋಗಿದ್ದೆ. ಸುಮಾರು 45 ನಿಮಿಷಗಳ ಕಾಲದ ಮಾತುಗಳಲ್ಲಿ ಕೃಷ್ಣಸ್ವಾಮಿಯವರೇ ಡಿ.ವಿ.ಜಿ.ಯವರಿಗೆ ವಾತ್ಸಲ್ಯ ವಸ್ತು ಎನ್ನುವುದರ ಪರಿಚಯವಾಯಿತು. ಕೈಹಿಡಿದೇ ಮಾತ ನಾಡಿಸುತ್ತಿದ್ದರು. ನಾವು ಹೋದ ಕೆಲಸವೂ ನೆರವೇರಿತು.



* * * * *

*ಶಕ್ತಿಯಿಲ್ಲದವರಿಗೆ ಇಲ್ಲಿ ಸ್ಥಳವಿಲ್ಲ — ಈ ಜನ್ಮದಲ್ಲೂ ಇಲ್ಲ, ಇನ್ನಾವುದೇ ಜನ್ಮದಲ್ಲೂ ಇಲ್ಲ! ದೌರ್ಬಲ್ಯವು ದಾಸ್ಯಕ್ಕೆ ದಾರಿ. ಶಾರೀರಿಕ-ಮಾನಸಿಕವಾದ ಎಲ್ಲ ಬಗೆಯ ದುಃಖಸಂಕಟಗಳಿಗೆ ನಮ್ಮನ್ನು ಈಡಾಗಿಸುವುದು ಈ ದೌರ್ಬಲ್ಯವೇ. ದೌರ್ಬಲ್ಯವು ಮರಣವಲ್ಲದೆ ಮತ್ತೇನು? ನಮ್ಮ ಸುತ್ತಮುತ್ತ ಮಿಲಿಯಗಟ್ಟಲೆ ರೋಗಾಣುಗಳು ಹರಡಿಕೊಂಡಿದ್ದರೂ ನಮ್ಮ ಶರೀರವು ದುರ್ಬಲವಾಗಿ ಅವುಗಳ ಆಕ್ರಮಣಕ್ಕೆ ಎಡೆಮಾಡಿಕೊಡದಿದ್ದರೆ ಅವು ನಮ್ಮನ್ನು ಏನೂ ಮಾಡಲಾರವು! ಹಾಗೆಯೇ, ದುಃಖ ಸಂಕಟಗಳೆಂಬ ರೋಗಾಣುಗಳು ಅಸಂಖ್ಯಾತವಾಗಿ ನಮ್ಮ ಸುತ್ತಮುತ್ತ ತುಂಬಿಕೊಂಡಿರಬಹುದು. ಆದರೇನಂತೆ? ನಮ್ಮ ಮನಸ್ಸೊಂದು ಸಶಕ್ತವಾಗಿದ್ದುಬಿಟ್ಟರೆ ಆ ದುಃಖ ಸಂಕಟಗಳು ನಮ್ಮನ್ನು ಕಾಡುವ ಮಾತಂತಿರಲಿ, ನಮ್ಮ ಹತ್ತಿರವೇ ಸುಳಿಯಲಾರವು. ಇದೊಂದು ದೊಡ್ಡ ಸತ್ಯ, ಏನೆಂದರೆ, ಶಕ್ತಿಯೇ ಜೀವನ, ದೌರ್ಬಲ್ಯವೇ ಮರಣ. ಶಕ್ತಿಯೇ ಆನಂದ, ಶಕ್ತಿಯೇ ಅಮೃತ, ಅದೊಂದೇ ಶಾಶ್ವತ. ದೌರ್ಬಲ್ಯದಿಂದ ನಿರಂತರ ಆಯಾಸ ಮತ್ತು ದುಃಖ; ದೌರ್ಬಲ್ಯವು ಮರಣವೇ!*

**- ಸ್ವಾಮಿ ವಿವೇಕಾನಂದ**

# ಕಿಟ್ಟಿ ಮೇಷ್ಟರ ನೆನಪುಗಳು

✍ ಸ್ವಾಮಿ ಗೌತಮಾನಂದ
ಅಧ್ಯಕ್ಷರು, ಶ್ರೀರಾಮಕೃಷ್ಣ ಮಠ, ಚೆನ್ನೈ

ಕಿಟ್ಟಿ ಮೇಷ್ಟರು ಮತ್ತು ನಾನು 1947-48 ರಿಂದ ಅಂದರೆ ಸುಮಾರು 60 ವರ್ಷಗಳಿಂದ ಪರಿಚಿತರು. ಇಬ್ಬರೂ ಮಲ್ಲೇಶ್ವರದಲ್ಲಿದ್ದವರು. ಮತ್ತೊಂದು ಸಾಮ್ಯ ನಮ್ಮಲ್ಲಿ ಎಂದರೆ ಬಸವನಗುಡಿಯ ರಾಮಕೃಷ್ಣಾಶ್ರಮಕ್ಕೆ ಮುಖ್ಯವಾಗಿ ಅಲ್ಲಿನ ಅಧ್ಯಕ್ಷರಾದ ಸ್ವಾಮಿ ಯತೀಶ್ವರಾನಂದರ ಭೇಟಿಮಾಡಿ ಆಶೀರ್ವಾದ ಪಡೆಯಲು ಒಂಬತ್ತು ಕಿ.ಮೀ. ನಡೆದು ಬಂದು ತಿರುಗಿಬಂದವರಲ್ಲಿ ನಾನೂ ಇದ್ದೆ, ಅವರೂ ಇದ್ದರು. ನಮ್ಮ ಮಲ್ಲೇಶ್ವರದಲ್ಲಿ ಗಾಂಧಿ ಜಯಂತಿ ಉತ್ಸವ ಮತ್ತು ಇತರ ರಾಷ್ಟ್ರೀಯ ಕಾರ್ಯಕ್ರಮಗಳ ಸಮಯದಲ್ಲಿ ಧ್ವಜಾರೋಹಣವಾಗುತ್ತಿತ್ತು. ಅದರಲ್ಲೂ ನಾವಿಬ್ಬರು ಕಲೆತುಕೊಳ್ಳುತ್ತಿದ್ದೆವು.

ಪ್ರಾಯಶಃ 1948ರಲ್ಲಿ ಮೈಸೂರು ರಾಜ್ಯವನ್ನು ಭಾರತ ಸರ್ಕಾರಕ್ಕೆ ಸೇರುವಂತೆ ಒತ್ತಾಯಪಡಿಸಲು, 'ಚಲೋ ದಿಲ್ಲಿ ಚಳುವಳಿ' ನಡೆದಿತ್ತು. ಅದರಲ್ಲೂ ಕಿಟ್ಟಿಮೇಷ್ಟ್ರು ಮತ್ತು ಅವರ ಕಾಲೇಜಿನ ಸಹವಿದ್ಯಾರ್ಥಿಗಳು ಪೋಲೀಸರಿಂದ ಬಂಧಿಸಲ್ಪಟ್ಟಾಗ ನಾವೆಲ್ಲಾ ಆ ಪೋಲೀಸ್ ಸ್ಟೇಷನ್‌ನನ್ನು ಘೇರಾವ್ ಮಾಡಿದ್ದೆವು. ಆಗ ಅವರೆಲ್ಲರನ್ನೂ ಅಲ್ಲಿಂದ ಸೆಂಟ್ರೆಲ್‌ಜೈಲ್ ಕಡೆ ಕರೆದುಕೊಂಡು ಹೋಗಿದ್ದು ನೆನಪಿದೆ.

ರಾಷ್ಟ್ರಪಿತ ಮಹಾತ್ಮಾ ಗಾಂಧಿಯವರು ಹತ್ಯೆ ಮಾಡಲ್ಪಟ್ಟಾಗ ನಾವೆಲ್ಲರೂ ಅತ್ಯಂತ ದುಃಖಿತರಾಗಿ ಕಣ್ಣೀರು ಸುರಿಸಿದ್ದೆವು. ವಿಶೇಷವಾಗಿ ಗಾಂಧಿ ಸಾಹಿತ್ಯ ಸಂಘದ ಸದಸ್ಯರಾದ ಕಿಟ್ಟಿ ಮೇಷ್ಟರು ಮತ್ತು ನಾವೆಲ್ಲ ಯುವಕರು ಅತಿ ದುಃಖದಿಂದ ಹಲವಾರು ಭಜನೆಕೂಟಗಳನ್ನು ಏರ್ಪಡಿಸಿದ್ದೆವು. ಒಂದು ವಿಶಾಲವಾದ ಪ್ರಾರ್ಥನಾಸಭೆ ಪ್ರತಿಯೊಂದು ಶುಕ್ರವಾರವೂ ಕರೆಯಲ್ಪಡುತ್ತಿತ್ತು. ಅದರಲ್ಲಿ ಕಿಟ್ಟಿಮೇಷ್ಟರು ಬಹಳ ಹೃದಯಸ್ಪರ್ಶಿಯಾದ ಭಕ್ತಿಗೀತೆಗಳನ್ನು ಹಾಡುತ್ತಿದ್ದರು. ಮುಖ್ಯವಾಗಿ ಗಾಂಧೀಜಿಗೆ ಪ್ರಿಯವಾದ, 'ವೈಷ್ಣವ ಜನತೋ ತೇ ನೆ ಕಹಿಯೆ ಜೆ ಪೀಡ ಪರಾಯಿ ಜಾಣೆರೆ' ಎಂಬ ಹಾಡು ಅತ್ಯಂತ ಹೃದಯಸ್ಪರ್ಶಿಯಾಗಿತ್ತು. ಅಂತಹ ಸಭೆಯಲ್ಲಿ ಒಬ್ಬ ಮುಸ್ಲಿಮ್ ಮುಲ್ಲಾ ಕೂಡ ಭಾಗವಹಿಸಿ ಕುರಾನ್ ಪಠಿಸಿದ್ದು ನೆನಪಿಗೆ ಬರುತ್ತದೆ.

ದಿ. ಸಿದ್ದವನಹಳ್ಳಿ ಕೃಷ್ಣಶರ್ಮ ಅವರಿಂದ ಆರಂಭಿಸಲ್ಪಟ್ಟ ಯುವಕರ ಸಂಘವಾದ 'ಗಾಂಧಿ ಸಾಹಿತ್ಯ ಸಂಘ' ಅಂದು ಅತೀ ಚಟುವಟಿಕೆಗಳ ಕೇಂದ್ರವಾಗಿತ್ತು. ಅದರಲ್ಲಿ ಬಹು ಮುಖ್ಯವಾದವರು ಕಿಟ್ಟಿ ಮೇಷ್ಟ್ರು. ಅವರು, ನಾನು ಶುದ್ಧ ಬಿಳಿಯ ಖಾದಿ ಜುಬ್ಬಾ ಮತ್ತು ಪೈಜಾಮ ಹಾಕಿಕೊಂಡು ಇರುತ್ತಿದ್ದೆವು. ಅವರ ಶುಭ್ರವರ್ಣ, ಹಸನ್ಮುಖಿ, ಗುಂಗುರು ಕ್ರಾಪು, ಹೊಳೆಯುವ ಕಣ್ಣುಗಳು, ವಿಶಾಲಹಣೆ, ತೆಳ್ಳಗೂ ಅತಿ ಚಟುವಟಿಕೆಯಾಗಿದ್ದ ಶರೀರ ಮತ್ತು ಸುಮಧುರ ಕಂಠ ನಮ್ಮೆಲ್ಲರನ್ನು ಸಹಜವಾಗಿ ಸೆಳೆಯುತ್ತಿದ್ದವು. ವಿಶೇಷವಾಗಿ ಸಾಹಿತ್ಯ ಸಂಘದ ಚಟುವಟಿಕೆಗಳಲ್ಲಿ ಮತ್ತು ಸಭೆಗಳಲ್ಲಿ, ಅವರು ತಮ್ಮನ್ನು ತೋರಿಸಿಕೊಳ್ಳುತ್ತಿರಲಿಲ್ಲ. ಆದರೆ ಎಲ್ಲರ ಕಣ್ಣಿಗೂ ಬಿದ್ದೇಬೀಳುತ್ತಿದ್ದರು ಅವರು ಸಹಜ ನೇತಾರರಂತೆ. ಅವರ ಸಹೃದಯತೆಗಾಗಿ ಮತ್ತು ಮಧುರ ವ್ಯವಹಾರಕ್ಕಾಗಿ ಎಲ್ಲರಿಂದಲೂ ಬಯಸಲ್ಪಡುತ್ತಿದ್ದರು.

ನಂತರ 1950ರಲ್ಲಿ ಮೊದಲಬಾರಿ ಅವರ ಕೂಡ ರಾಮಕೃಷ್ಣಾಶ್ರಮ, ಬಸವನಗುಡಿಗೆ ಹೋದದ್ದು ನನಗೆ ನೆನಪಿದೆ. ಅದೇ ನನ್ನ ಪ್ರಥಮ ಪ್ರವೇಶ ಆಶ್ರಮಕ್ಕೆ. ಅಂದು ಶ್ರೀಕೃಷ್ಣನ ವಿಷಯವಾಗಿ ಬಂದು ಸಭೆ ನಡೆದಿತ್ತು. ಸಭೆಯಲ್ಲಿ ಇಬ್ಬರು ರಾಮಕೃಷ್ಣ ಮಿಷನ್ನಿನ ವಿಶಿಷ್ಟ ಅಗ್ರ ಸ್ವಾಮಿಗಳು ಮಾತನಾಡುವರಿದ್ದರು. ಒಬ್ಬರು ಸ್ವಾಮಿ ತ್ಯಾಗೀಶಾನಂದರು ಮತ್ತೊಬ್ಬರು ಸ್ವಾಮಿ ಯತೀಶ್ವರಾನಂದಜಿ ಮಹಾರಾಜ್. ಅವರು ಉತ್ತಮ ಭಾಷಣ ಮಾಡಿದರು. ಶ್ರೀಕೃಷ್ಣನ ಜೀವನ ಮತ್ತು ಸಂದೇಶದ ವಿಷಯವಾಗಿ ಪ್ರೊ. ವಿ. ಸೀತಾರಾಮಯ್ಯನವರು ಕೂಡ ಮಾತನಾಡಿದರು. ಅಂದು ಆ ಇಬ್ಬರು ಹಿರಿಯ ಸ್ವಾಮಿಗಳ ಕೂಡ

ವೈಯಕ್ತಿಕವಾಗಿ ಏನೂ ಮಾತನಾಡಲಾಗಲಿಲ್ಲ ಎಂದು ನೆನಪಿದೆ.

ಮತ್ತೆ ಸುಮಾರು ನಾಲ್ಕು ವರ್ಷಗಳ ನಂತರ ನಾನು ರಾಮಕೃಷ್ಣಾಶ್ರಮಕ್ಕೆ ಹೋದಾಗ ಸ್ವಾಮಿ ಯತೀಶ್ವರಾನಂದಜಿ ಅಧ್ಯಕ್ಷರಾಗಿದ್ದರು. ತ್ಯಾಗೀಶಾನಂದಜಿಯವರ ಮಹಾಸಮಾಧಿಯಾಗಿತ್ತು. ಕಿಟ್ಟಿ ಮೇಷ್ಟರನ್ನು ಆಗ ನಾನು ನೋಡಿದ್ದು ಬಹಳ ಬಿರುಸಾಗಿ ಬಾಲಕಸಂಘದ ಹುಡುಗರಿಗೆ ಹಾಡನ್ನು ಹೇಳಿ ಕೊಡುವುದರಲ್ಲಿ ಮತ್ತು ಆಶ್ರಮದ ಪ್ರಾರ್ಥನೆಯಲ್ಲಿ ಹಾಡುವುದರಲ್ಲಿ. ಅವರ ಹಿಂದಿ ಹಾಡು ಕಬೀರದಾಸರದು 'ಜಲಬೀಚ ಧೋಬಿಯಾ, ಮರತ ಪಿಯಾಸಾ' ಎಂಬುದು ಬಹಳ ಮರ್ಮಸ್ಪರ್ಶಿಯಾಗಿರುತ್ತಿತ್ತು. ಅವರ ಹಿಂದಿ ಭಜನೆಗಳು ಮತ್ತು ಕರ್ನಾಟಕ ಸಂಗೀತದ ಹಾಡುಗಳು ಎರಡೂ ಸುಂದರವಾಗಿರುತ್ತಿತ್ತು.

ಮತ್ತೆ 1956ರಲ್ಲಿ ನಾನು ಪೂಜ್ಯ ಯತೀಶ್ವರಾನಂದಜಿಯವರಿಂದ ಡೆಲ್ಲಿಗೆ ಕಳುಹಿಸಲ್ಪಟ್ಟಿದ್ದರಿಂದ ಕಿಟ್ಟಿ ಮೇಷ್ಟರ ಸತ್ಸಂಗ ಸುಮಾರು 15 ವರ್ಷ ದೊರೆಯದೆ ಹೋಯಿತು. 1972ರಲ್ಲಿ ಸಂನ್ಯಾಸಿಯಾಗಿ ತೀರ್ಥಯಾತ್ರೆ ಮಾಡುತ್ತ ಬೆಂಗಳೂರಿಗೆ ಬಂದಾಗ ಕಿಟ್ಟಿ ಮೇಷ್ಟರು ತಮ್ಮ ಗುರು ಮಹಾರಾಜರ ಸಂಗೀತ ಸೇವೆಯನ್ನು ಒಂದೇ ತರಹವಾಗಿ ನಡೆಸುತ್ತಿದ್ದುದನ್ನು ಕಂಡೆ. ಆದಾದಮೇಲೆ ಕೆಲವು ವರ್ಷದ ನಂತರ ಮತ್ತೊಮ್ಮೆ ಬಂದಾಗಲೂ ಕಿಟ್ಟಿ ಮೇಷ್ಟರನ್ನು ನಿವೃತ್ತ ಪ್ರಾಧ್ಯಾಪಕರಾಗಿ ನೋಡಿದೆ, ಅವರ ಸಂಬಂಧಿಗಳೊಬ್ಬರ ಮನೆಯಲ್ಲಿ. ಅಲ್ಲೂ ಅದೆಂತಹ ಹಸನ್ಮುಖತೆ, ತೃಪ್ತಿ ಪೂರ್ಣತೆ ಮತ್ತು ಹುರುಪಿನಿಂದ ಕೆಲಸ ಮಾಡುವ ಸ್ವಭಾವ.

ಕೊನೆಯ 11 ವರ್ಷಗಳಿಂದ ಮದ್ರಾಸ್ ಮಠಕ್ಕೆ ಬಂದಿದ್ದರ ಕಾರಣವಾಗಿ ಹಲವು ಬಾರಿ ಬೆಂಗಳೂರಿಗೆ ಹೋಗಿದ್ದೇನೆ. ವಿಶೇಷವಾಗಿ ಬೆಂಗಳೂರು ಆಶ್ರಮದ ಶತಮಾನೋತ್ಸವ ಉದ್ಘಾಟನೆ ಮತ್ತು ಕೆಲವು ಭಕ್ತ ಸಮ್ಮೇಳನ ಇಂತಹ ಸನ್ನಿವೇಶಗಳಲ್ಲಿ ಕಿಟ್ಟಿ ಮಾಷ್ಟರ್ ಕೂಡ ಹಲವು ಬಾರಿ ಬಹಳ ಹೃದಯಸ್ಪರ್ಶಿ ಸಂಭಾಷಣೆಗಳು ನಡೆದಿದ್ದವು. ಆದರೆ ಅವರ ಮಾತುಕತೆಗಳ ಮೂಲಕವಾಗಿ ಆಗಲಿ ಅಥವಾ ಅವರ ಹುರುಪು ಉತ್ಸಾಹಗಳಲ್ಲಾಗಲಿ ಅವರು 80 ವರ್ಷದವರಾಗಿದ್ದಾರೆ ಎಂದು ಅನ್ನಿಸಲೇ ಇಲ್ಲ. ನನಗೆ ಕಳುಹಿಸಲ್ಪಟ್ಟ ಕರೆಯೋಲೆಯ ಮೂಲಕ ತಿಳಿದಾಗ ನನಗೆ ಒಂದು ಕಡೆ ಆಶ್ಚರ್ಯ ಮತ್ತೊಂದು ಕಡೆ ಬಹಳ ಸಂತೋಷವಾಯಿತು. 80 ವರ್ಷಗಳನ್ನು ನಗುನಗುತ್ತಲೇ ಕಳೆದ ಕಿಟ್ಟಿ ಮೇಷ್ಟು ಇನ್ನೂ ಉಳಿದಿರುವ ಜುಜಬಿ 20 ವರ್ಷಗಳನ್ನು ಹಾಗೆಯೇ ಕಳೆಯುತ್ತಾರೆ ಎಂದು ನಂಬುತ್ತೇನೆ.

ಭಗವಾನ್ ಶ್ರೀರಾಮಕೃಷ್ಣರ, ಶ್ರೀಮಾತೆ ಶಾರದಾದೇವಿಯವರ ಮತ್ತು ಸ್ವಾಮಿ ವಿವೇಕಾನಂದರ ವಿಶೇಷ ಆಶೀರ್ವಾದಗಳು ಅವರನ್ನು ಜೀವನ ಪಥದಲ್ಲಿ ಸುಖವಾಗಿ ನಡೆಸಿಕೊಂಡು ಹೋಗಲಿ ಎಂದು ಪ್ರಾರ್ಥಿಸುತ್ತಾ, ನನ್ನ ಅಭಿನಂದನೆಗಳನ್ನು ಅವರಿಗೆ ಸಮರ್ಪಿಸುತ್ತಾ, ಈ ಲೇಖನವನ್ನು ಮುಗಿಸುತ್ತಿದ್ದೇನೆ.



* * * * *

*ಮಾನವನಿಗೆ ತನ್ನ ಅಂತರ್ಯದಲ್ಲಿ ಅಪರಿಮಿತ ಶಕ್ತಿ ತುಂಬಿಕೊಂಡಿದೆ ಎಂಬುದು ತಿಳಿದಿರಲಿ, ತಿಳಿಯದಿರಲಿ, ಅವನಲ್ಲಿ ಅನಂತ ಶಕ್ತಿಯಿರುವುದಂತೂ ಸತ್ಯ. ಅವನಿಗೆ ಅದರ ಅರಿವು ಮೂಡುವುದೇ ತಡ ಆ ಶಕ್ತಿಯು ಹೊರಹೊಮ್ಮಲಾರಂಭಿಸುತ್ತದೆ.*

*ಅನಂತ ಶಕ್ತಿ, ಅನಂತ ಜ್ಞಾನ ತನ್ನಲ್ಲಡಗಿದೆ ಎಂಬುದರ ಪೂರ್ಣ ಅರಿವು ಮೂಡಿದಾಗ ಮಾನವನೊಳಗಣ ಮಹಾತ್ಮ ವಿಜೃಂಭಿಸುತ್ತಾನೆ.*

**- ಸ್ವಾಮಿ ವಿವೇಕಾನಂದ**

# ಆತ್ಮಜ್ಞಾನದ ಕಾಂತಿ

✍ **ಸ್ವಾಮಿ ಜಗದಾತ್ಮಾನಂದ,** ಅಧ್ಯಕ್ಷರು
ಶ್ರೀರಾಮಕೃಷ್ಣ ಶಾರದಾಶ್ರಮ, ಪೊನ್ನಂಪೇಟೆ, ದಕ್ಷಿಣ ಕೊಡಗು

**ಮ**ನುಷ್ಯನಾಗಿ ಗೋಚರಿಸುವ ದೇಹೇಂದ್ರಿಯ ಮನೋಬುದ್ಧಿಗಳ ಪರಮಾದ್ಭುತ ಯಂತ್ರದ ಆಳದಲ್ಲಿ ದಿವ್ಯತೆ ಎಂದರೆ ಸಾವಿಲ್ಲದ ನೋವಿಲ್ಲದ ಶಾಶ್ವತ ಸತ್ಯವಿದೆ, ದಿವ್ಯ ಆನಂದವಿದೆ. ನಿಜವಾದ ಸ್ವಾತಂತ್ರ್ಯ ಎಂದರೆ ಎಲ್ಲ ಬಂಧನ ಮತ್ತು ಪರಿಮಿತಿಗಳಿಂದ ಬಿಡುಗಡೆ ಪಡೆಯುವ ಸಾಧ್ಯತೆ ಇದೆ. ಅದನ್ನೇ ಪಡೆಯಲು ಪ್ರತಿಯೊಬ್ಬನಿಗೂ ಸಾಧ್ಯ. ಏಕೆಂದರೆ ಅದು ದೂರದಲ್ಲಿಲ್ಲ. ಸಮೀಪದಲ್ಲೇ ಇದೆ. ಆಂತರ್ಯದ ಆಳದಲ್ಲೇ ಇದೆ. ಅದನ್ನು ಪಡೆಯುವುದೇ ಅಥವಾ ಅನುಭವಕ್ಕೆ ತಂದುಕೊಳ್ಳುವುದೇ ಜೀವನದ ಶ್ರೇಷ್ಠ ಹಾಗೂ ಕೊನೆಯ ಗುರಿ. ಅದನ್ನು ಪಡೆಯಲು, ಮಾಡುವ ಪ್ರಾಮಾಣಿಕ ಪ್ರಯತ್ನದಲ್ಲಿ, ಚಾರಿತ್ರ್ಯಬಲ ಸಂವರ್ಧನೆಯಲ್ಲಿ ಧರ್ಮಮೂಲವಿದೆ. ಶ್ರದ್ಧೆ, ಸಂಯಮ, ಸತ್ಯನಿಷ್ಠೆ, ಅಹಿಂಸೆ, ನ್ಯಾಯಪರತೆ, ಕರ್ತವ್ಯ ನಿಷ್ಠೆ, ನಿಸ್ವಾರ್ಥ ಪ್ರೀತಿ, ತಾಳ್ಮೆ, ಕ್ಷಮೆ ಮೊದಲಾದ ಗುಣಗಳು ಜಾತಿಮತ ಭೇದವಿಲ್ಲದೇ ಯಾರಲ್ಲೇ ಆಗಲಿ ವ್ಯಕ್ತವಾಗಲು ಆರಂಭವಾಗಿವೆಯೋ ಅವರಲ್ಲಿ ಆತ್ಮಜ್ಞಾನದ ಕಾಂತಿ ಪ್ರಕಟವಾಗಲು ಶುರುವಾಗಿದೆ ಎಂದರ್ಥ. ದೈವೀಕತೆಯ ಈ ಅಭಿವ್ಯಕ್ತಿಯನ್ನು ನಾವು ಅಂಥ ಗುಣಸಂಪನ್ನರಲ್ಲಿ ಗುರುತಿಸಬೇಕು. ಅಂಥವರೇ ದೇವರಿಗೆ ಅತ್ಯಂತ ಹತ್ತಿರದವರು. ಅಂಥವರ ಹೃದಯವೇ ದೇವರ ಆವಾಸಸ್ಥಾನ.

ಹೀಗೆ ಪ್ರತಿಯೊಬ್ಬರಲ್ಲೂ ಈ ದೈವತ್ವ ಸ್ವಲ್ಪವಾದರೂ ಪ್ರಕಟವಾದರೆ ಸಮಾಜವು ತನ್ನಿಂದ ತಾನೇ ಉದ್ಧಾರದ ಹೆದ್ದಾರಿಯಲ್ಲಿ ನಡೆಯತೊಡಗುತ್ತದೆ ಎನ್ನುವುದರಲ್ಲಿ ಸಂದೇಹವಿದೆಯೇ? ದೇವರ ದಾರಿಯಲ್ಲಿ ಅಥವಾ ಆತ್ಮಸಾಕ್ಷಾತ್ಕಾರದ ಪಥದಲ್ಲಿ ನಡೆಯುವವನು ನಾನಾ ತೆರನಾದ ಪ್ರಲೋಭನೆಗಳಿಂದ ತಪ್ಪಿಸಿಕೊಂಡು ತಾನು ಒಳ್ಳೆಯವನಾಗಿರುತ್ತ ಇತರರಿಗೂ ತ್ರಿಕರಣಪೂರ್ವಕವಾಗಿ ಒಳಿತನ್ನು ಮಾಡುವನು. ಈ ಕೆಲಸ ಸಾಧ್ಯವಾಯಿತೆಂದರೆ ಧರ್ಮಸಂಸ್ಥಾಪನೆ ಆದಂತೆಯೇ.

ಆತ್ಮಾಭಿಮುಖನಾಗದೇ ದೇಹೇಂದ್ರಿಯಾದಿಗಳ ಒಕ್ಕೂಟವನ್ನೇ ತಾನೆಂದು ತಿಳಿದುಕೊಂಡ ವ್ಯಕ್ತಿ ಎಷ್ಟೇ ಬುದ್ಧಿವಂತನಾದರೂ ಪ್ರತಿಭಾಶಾಲಿ ಎನಿಸಿದರೂ ಹೊರ ಜಗತ್ತಿನ ರಹಸ್ಯವನ್ನು ಭೇದಿಸಿ ವಿಜ್ಞಾನಿ ಎನ್ನಿಸಿಕೊಂಡರೂ ಬದುಕಿನಲ್ಲಿ ಅನಿವಾರ್ಯವಾಗಿ ಬರುವ ಕಷ್ಟಕಂಟಕಗಳನ್ನು ಧೈರ್ಯದಿಂದ ಎದುರಿಸಲಾರ; ಸರ್ವತೋಮುಖ ಬೆಳವಣಿಗೆಯಿಂದ ವ್ಯಕ್ತಿತ್ವದ ಮೇಲಿನ ಮಜಲುಗಳನ್ನು ತಲುಪಲಾರ; ಅಧ್ಯಾತ್ಮದ ಅಮೃತರಸವನ್ನು ಈಂಟಲಾರ; ಪೂರ್ಣದೃಷ್ಟಿಯ ಬದುಕನ್ನು ಬದುಕಲಾರ, ಜನನದ ಮೊದಲು ಏನು? ಮರಣದ ಬಳಿಕ ಏನು? ಎಂಬುದನ್ನು ತಿಳಿಯಲಾರ. ಸ್ವನಿರ್ದೇಶನಾ ಸಾಮರ್ಥ್ಯವನ್ನು ಪಡೆಯಲಾರ. ಬದುಕಿನ ಅರ್ಥ ಉದ್ದೇಶಗಳನ್ನು ತಿಳಿಯಲಾರ. ಆದರ್ಶ ಜೀವನ ನಡೆಸಲಾರ. ಆದುದರಿಂದಲೇ ಕರೆ:

ನಿನ್ನಯ ಗುರಿಯು ಆತ್ಮದರುಶನ
ನಿನ್ನೊಳಗೇ ಇಹುದಾರತುನ
ಬನ್ನಬಡುತ ಈ ಕ್ಷುದ್ರಜೀವನದಿ
ಇನ್ನು ತೊಳಲದಿರು ಮುನ್ನಡೆ ಸಖನೇ।

ಉತ್ತಿಷ್ಠತ! ಜಾಗ್ರತ!



* * * * *

# ಶ್ರೀರಾಮಕೃಷ್ಣರ ಆತ್ಮಕಥನ

✍ **ಸ್ವಾಮಿ ರಾಘವೇಶಾನಂದ,** ಅಧ್ಯಕ್ಷರು
ರಾಮಕೃಷ್ಣ ಮಿಷನ್ ಆಶ್ರಮ, ಬೆಳಗಾಂ

ಶ್ರೀರಾಮಕೃಷ್ಣರು ಯಾವ ಆತ್ಮಚರಿತ್ರೆಯನ್ನೂ ಬರೆಯುವ ಗೋಜಿಗೆ ಹೋಗಲಿಲ್ಲ ಅಥವಾ ಹೇಳಿಕೊಳ್ಳಲೂ ಇಷ್ಟಪಡುತ್ತಿರಲಿಲ್ಲ. ಆದರೂ ತಮ್ಮ ಆತ್ಮೀಯ ಭಕ್ತರೊಡನೆ ಮಾತನಾಡುತ್ತಿದ್ದಾಗ ಆಗಾಗ ಏನಾದರೂ ತಮ್ಮ ಜೀವನದ ಘಟನೆಗಳ ಬಗ್ಗೆ, ಅದರಲ್ಲೂ ಬಾಲ್ಯಜೀವನದ ಬಗ್ಗೆ ಹೇಳಿಕೊಳ್ಳುತ್ತಿದ್ದರು. ಅವರ ಜೀವನಚರಿತ್ರೆಯನ್ನು ಓದಿದವರಿಗೆಲ್ಲಾ, ಈ ಘಟನೆಗಳು ತುಂಬಾ ಚಿರಪರಿಚಿತವಾಗಿದ್ದರೂ ಅವರ ಮುಖಾರವಿಂದದಿಂದ ಈ ಅಮೃತವಾಣಿಯನ್ನು ಕೇಳಲು ಎಷ್ಟು ಮಧುರವಾಗಿರುತ್ತದೆ?

"ಬಾಲ್ಯದಿನಗಳಲ್ಲಿ ಕಾಮಾರಪುಕೂರಿನ ಸ್ತ್ರೀಯರು, ಪುರುಷರು ಎಲ್ಲರೂ ನನ್ನನ್ನು ತುಂಬಾ ಪ್ರೀತಿಸುತ್ತಿದ್ದರು. ಅವರ್ಲು ಯಾವಾಗಲೂ ನಾನು ಹಾಡುವುದನ್ನು ಕೇಳಲು ಇಷ್ಟಪಡುತ್ತಿದ್ದರು. ನಾನು ಬೇರೆಯವರ ಮಾತುಕತೆ, ಹಾವಭಾವಗಳನ್ನು ಅನುಕರಿಸಿ ಅವರನ್ನೆಲ್ಲಾ ಸಂತೋಷಗೊಳಿಸುತ್ತಿದ್ದೆ. ಹೆಂಗಸರು ನನಗಾಗಿ ತಿಂಡಿತಿನಿಸುಗಳನ್ನು ಮನೆಯಲ್ಲಿ ಪ್ರತ್ಯೇಕವಾಗಿ ಎತ್ತಿಡುತ್ತಿದ್ದರು. ನನ್ನನ್ನು ಯಾರೂ ಅಪರಿಚಿತನಂತೆ ನೋಡುತ್ತಿರಲಿಲ್ಲ. ಪ್ರತಿಯೊಬ್ಬರೂ ನನ್ನನ್ನು ತಮ್ಮ ಮನೆಯಲ್ಲಿ ಒಬ್ಬರಂತೆ ಕಾಣುತ್ತಿದ್ದರು.

"ನಾನು ಯಾವಾಗಲೂ ಆನಂದದಿಂದಿರುತ್ತಿದ್ದೆ. ಯಾರ ಮನೆಯಲ್ಲಿ ಸಂತೋಷ ತುಂಬಿದೆಯೋ ಅಲ್ಲಿಗೆ ಮಾತ್ರ ಹೋಗುತ್ತಿದ್ದೆ. ಎಲ್ಲಿ ದುಃಖ, ತಾಪತ್ರಯಗಳು ಕಾಣುತ್ತಿತ್ತೋ ಅಲ್ಲಿಂದ ದೂರ ಓಡಿಹೋಗುತ್ತಿದ್ದೆ.

"ನಮ್ಮ ಹಳ್ಳಿಯ ಒಂದಿಬ್ಬರು ಹುಡುಗರು ನನ್ನ ಆಪ್ತಮಿತ್ರರಾಗಿದ್ದರು. ನಾನು ಒಂದಿಬ್ಬರನ್ನು ತುಂಬಾ ಹಚ್ಚಿಕೊಂಡಿದ್ದೆ. ಆದರೆ ಈಗ ಅವರೆಲ್ಲಾ ಸಂಸಾರದಲ್ಲಿ ಮುಳುಗಿದ್ದಾರೆ. ಆಗಾಗ ಅವರು ಇಲ್ಲಿಗೂ (ದಕ್ಷಿಣೇಶ್ವರಕ್ಕೆ) ನನ್ನನ್ನು ಕಾಣಲಿಕ್ಕೆ ಬರುತ್ತಾರೆ. ನನ್ನನ್ನು ನೋಡಿ ಉದ್ಗರಿಸುತ್ತಾರೆ, 'ಆಹಾ, ಏನಾಶ್ಚರ್ಯ! ಇವನು ನಮ್ಮ ಶಾಲೆಯಲ್ಲಿ ಹೇಗಿದ್ದನೋ, ಈಗಲೂ ಹಾಗೆಯೇ ಇದ್ದಾನೆ.' ನಾನು ತರಗತಿಯಲ್ಲಿದ್ದಾಗ ಗಣಿತ ನನಗೆ ದೊಡ್ಡ ತಲೆನೋವಾಗಿತ್ತು. ಆದರೆ ನಾನು ಸುಂದರವಾಗಿ ಚಿತ್ರಗಳನ್ನು ಬಿಡಿಸುತ್ತಿದ್ದೆ. ದೇವ-ದೇವಿಯರ ಪುಟ್ಟಪುಟ್ಟ ವಿಗ್ರಹಗಳನ್ನು ಮಣ್ಣಿನಿಂದ ಮಾಡಬಲ್ಲವನಾಗಿದ್ದೆ. ನಾನು ಸಾಧುಸಂತರು ತಂಗುತ್ತಿದ್ದ ಛತ್ರಗಳಿಗೆ ಹೋಗಿ, ಅವರ ದಿನಚರಿಯನ್ನು ಗಂಟೆಗಟ್ಟಲೆ ಅವಲೋಕಿಸುತ್ತಿದ್ದೆ.

"ಎಲ್ಲಿಯಾದರೂ ರಾಮಾಯಣ, ಭಾಗವತದ ಕಥೆಗಳು ಓದಲ್ಪಡುತ್ತಿದ್ದರೆ, ಅಲ್ಲಿಗೆ ಹೋಗಿ ಬಹಳ ಆಸಕ್ತಿಯಿಂದ ಕೇಳುತ್ತಿದ್ದೆ. ಅಷ್ಟೇ ಅಲ್ಲ, ನಂತರ ಓದುತ್ತಿರುವವರ ಆ ಹಾವಭಾವಗಳನ್ನು ಅನುಕರಿಸಿ ತೋರಿಸಿ ಎಲ್ಲರನ್ನೂ ನಗಿಸುತ್ತಿದ್ದೆ.

"ಸ್ತ್ರೀಯರ ಹಾವಭಾವಗಳನ್ನು ಚೆನ್ನಾಗಿ ಗಮನಿಸಿ, ಅವರಂತೆಯೇ ಅನುಕರಿಸುತ್ತಿದ್ದೆ."

ಒಮ್ಮೊಮ್ಮೆ ಶ್ರೀರಾಮಕೃಷ್ಣರು ತಮ್ಮ ಸಾಧನೆಯ ದಿನಗಳನ್ನು ನೆನೆಸಿಕೊಂಡು ಹೇಳುತ್ತಿದ್ದರು.

"ಓ! ಆಗ ನಾನು ಎಂತಹ ಅವಸ್ಥೆಯನ್ನು ದಾಟಿದೆ. ಆಗ ನಾನು ಈ ದೇವಸ್ಥಾನದಲ್ಲಿ ಊಟಮಾಡುತ್ತಿರಲಿಲ್ಲ. ಬಾರಾನಗರ್ ಅಥವಾ ಅರಿಯದಾಹ ಅಥವಾ ಯಾವುದಾದರೂ ಹಳ್ಳಿಗೆ ನಡೆದುಕೊಂಡು ಹೋಗುತ್ತಿದ್ದೆ. ಸಾಧಾರಣವಾಗಿ ಆಗ ಊಟದ ಸಮಯವೆಲ್ಲಾ ಮುಗಿದಿರುತ್ತಿತ್ತು. ಯಾವುದಾದರೂ ಮನೆಗೆ ಹೋಗಿ, ಒಂದು ಮಾತೂ ಆಡದೆ ಸುಮ್ಮನೆ ಕುಳಿತುಬಿಡುತ್ತಿದ್ದೆ. ಆ ಮನೆಯವರೇನಾದರೂ ತಾವಾಗೇ 'ಏಕೆ ಬಂದಿದ್ದೀ?' ಎಂದು ಕೇಳಿದರೆ, 'ನನಗೆ ಏನಾದರೂ ತಿನ್ನಲು ಬೇಕು' ಎಂದು ಹೇಳುತ್ತಿದ್ದೆ. ಆಗಾಗ ಕರೆಯದೆಯೇ ನಾನು ಆಲಂ ಬಜಾರ್‌ನ ರಾಮಚಟರ್ಜಿಯ ಮನೆಗೋ ಅಥವಾ

ದಕ್ಷಿಣೇಶ್ವರದ ಚೌಧುರಿಯ ಮನೆಗೋ ಹೋಗುತ್ತಿದ್ದೆ. ಯಾಕೋ, ಚೌಧುರಿಯ ಮನೆಯ ಊಟ ಇಷ್ಟವಾಗುತ್ತಿರಲಿಲ್ಲ.

"ಒಂದು ದಿನ ಮಥುರನಾಥನನ್ನು ದೇವೇಂದ್ರ ಠಾಕೂರಿನ ಮನೆಗೆ ಕರೆದುಕೊಂಡು ಹೋಗು ಎಂದು ಕೇಳಿಕೊಂಡೆ. ನಾನು ಹೇಳಿದೆ, 'ದೇವೇಂದ್ರ ದೇವರನಾಮ ಸ್ಮರಣೆ ಮಾಡುತ್ತಾನೆ. ನಾನು ಅವನನ್ನು ನೋಡಬೇಕು. ಅಲ್ಲಿಗೆ ಕರೆದುಕೊಂಡು ಹೋಗುವೆಯಾ?' ಆದರೆ ಮಥುರ ತುಂಬಾ ಅಭಿಮಾನಿ ವ್ಯಕ್ತಿ. ಅಂತಹವನು ಬೇರೆಯವರ ಮನೆಗೆ ಕರೆಯದೆ ಹೋಗಿಯಾನೇ? ಆದರೆ ಅವನು ಹೇಳಿದ, 'ಆಗಲಿ, ನಾನು ದೇವೇಂದ್ರ ಶಾಲೆಯಲ್ಲಿ ಒಟ್ಟಿಗೇ ಓದುತ್ತಿದ್ದೆವು. ನಾನು ನಿಮ್ಮನ್ನು ಅಲ್ಲಿಗೆ ಕರೆದುಕೊಂಡು ಹೋಗುವೆ.' ಇನ್ನೊಮ್ಮೆ ಒಂದು ತಮಾಷೆ ನಡೆಯಿತು. ಬಾಗ್‌ಬಜಾರಿನ ಸೇತುವೆಯ ಹತ್ತಿರ ದೀನಾ ಮುಖರ್ಜಿ ಎನ್ನುವವನಿದ್ದಾನೆ. ಅವನು ತುಂಬಾ ಒಳ್ಳೆಯವನು ಎಂದು ಯಾರೋ ನನಗೆ ಹೇಳಿದರು. ತಕ್ಷಣ ನಾನು ಮಥುರನಾಥನನ್ನು ಅಲ್ಲಿಗೆ ಕರೆದುಕೊಂಡು ಹೋಗುವಂತೆ ಪೀಡಿಸಿದೆ. ನನ್ನ ಬಲವಂತಕ್ಕಾಗಿ, ತನ್ನ ದೊಡ್ಡ ಕುದುರೆಯ ಸಾರೋಟಿನಲ್ಲಿ ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋದ. ಅದು ತುಂಬಾ ಚಿಕ್ಕಜಾಗವಾಗಿತ್ತು. ಒಬ್ಬ ಧನಿಕ ಅಂತಹ ದೊಡ್ಡ ಗಾಡಿಯಲ್ಲಿ ಅಲ್ಲಿಗೆ ಬಂದುದು ಆ ಮನೆಯವರನ್ನೆಲ್ಲಾ ಗಾಬರಿಗೊಳಿಸಿತು. ಸಾಲದ್ದಕ್ಕೆ ಅಂದು ದೀನಾನ ಮಗನ ಉಪನಯನದ ದಿನವಾಗಿತ್ತು. ಮನೆಯೆಲ್ಲಾ ಬಂಧು-ಬಾಂಧವರಿಂದ ತುಂಬಿಹೋಗಿತ್ತು. ದೀನಾನಿಗೆ ನಮ್ಮನ್ನು ಮನೆಗೆ ಸ್ವಾಗತಿಸಲು ಸ್ಥಳವೇ ಇರಲಿಲ್ಲ. ನಾವು ಮನೆಯ ಪಕ್ಕದ ಕೊಠಡಿಯ ಒಳಹೋಗಲು ಯತ್ನಿಸಿದೆವು. ಆಗ ಕೆಲವರು ಕೂಗಲಾರಂಭಿಸಿದರು, 'ಓ, ದಯವಿಟ್ಟು ಅಲ್ಲಿ ಹೋಗಬೇಡಿ. ಅಲ್ಲಿ ಬರೀ ಹೆಂಗಸರಿದ್ದಾರೆ' ಎಂದು. ನಿಜವಾಗಿಯೂ ಅಂದು ಬಹಳ ಮುಜುಗರಕ್ಕೆ ಸಿಕ್ಕಿಕೊಂಡೆವು. ಹಿಂದುರಿಗಿದ ಮೇಲೆ ಮಥುರ ಹೇಳಿದ, 'ಬಾಬಾ, ಇನ್ನುಮೇಲೆ ನಾನು ನಿಮ್ಮ ಮಾತನ್ನು ಕೇಳುವುದಿಲ್ಲ.' ನಾನು ಜೋರಾಗಿ ನಕ್ಕುಬಿಟ್ಟೆ. ನಾನು ಎಂಥಾ ಅವಸ್ಥೆಗಳನ್ನೆಲ್ಲಾ ದಾಟಿದ್ದೇನೆ. ಒಮ್ಮೆ ಕುಮಾರ ಸಿಂಗ್ ಸಾಧುಗಳಿಗೆಲ್ಲಾ ಒಂದು ಔತಣವನ್ನು ಕೊಟ್ಟ. ನನ್ನನ್ನೂ ಕರೆದಿದ್ದ. ಅಲ್ಲಿ ಬಹಳ ಸಾಧು-ಸಂತರು ನೆರೆದಿದ್ದರು. ನಾನು ಊಟಕ್ಕೆ ಕುಳಿತಾಗ ಹಲವರು ನನ್ನ ಬಗ್ಗೆ ವಿಚಾರಿಸಿದರು. ಆಗ ನಾನು ಅವರಿಗೆಲ್ಲಾ ದೂರವಾಗಿ ಪ್ರತ್ಯೇಕವಾಗಿ ಕುಳಿತುಕೊಳ್ಳಬೇಕು ಎನಿಸಿತು. ಅವರೆಲ್ಲಾ ದೇವರ ಬಗ್ಗೆ ಚಿಂತಿಸದೆ ನನ್ನ ಬಗ್ಗೆ ಏಕೆ ಆಸಕ್ತಿ ತೋರಿಸುತ್ತಾರೆ ಎನಿಸಿತು. ಸಾಧುಗಳೆಲ್ಲಾ ಊಟಕ್ಕೆ ಕುಳಿತರು. ನಾನು ಕುಳಿತ ತಕ್ಷಣ ಊಟ ಮಾಡಲು ಆರಂಭಿಸಿದೆ. ಅವರಿಗೆಲ್ಲಾ ಬೇಸರವಾಗಿ, 'ಎಂತಹ ಮನುಷ್ಯನಪ್ಪ ಇವನು?' ಎಂದು ತಮ್ಮ ತಮ್ಮಲ್ಲೇ ಮಾತಾಡಿಕೊಂಡರು.

"ಭಗವಂತನ ಸಾಕ್ಷಾತ್ಕಾರಕ್ಕೆ ಆಧ್ಯಾತ್ಮಿಕ ಸಾಧನೆ ತುಂಬಾ ಅವಶ್ಯ. ನಾನು ಬಹಳ ಕಠಿಣ ಸಾಧನೆಗಳನ್ನು ಮಾಡಿದೆ. ಬಿಲ್ವವೃಕ್ಷದ ಕೆಳಗೆ ಎಷ್ಟೊಂದು ತಪಸ್ಸು ಮಾಡಿದೆ! ಆ ಮರದ ಕೆಳಗೆ ಬಿದ್ದುಕೊಂಡು, ಜಗನ್ಮಾತೆಯನ್ನು ನೆನೆಸಿಕೊಂಡು ಕಣ್ಣೀರು ಸುರಿಸುತ್ತಿದ್ದೆ, ಪ್ರಾರ್ಥಿಸುತ್ತಿದ್ದೆ, 'ಅಮ್ಮಾ ನಿನ್ನ ದರುಶನ ಕೊಡು.' ಎಷ್ಟು ಕಣ್ಣೀರು ಸುರಿಸುತ್ತಿದ್ದೆನೆಂದರೆ ನನ್ನ ದೇಹವೆಲ್ಲಾ ಒದ್ದೆಯಾಗಿ ಹೋಗುತ್ತಿತ್ತು."

ಇದ್ದಕ್ಕಿದ್ದಂತೆ ತಮ್ಮ ಬಗ್ಗೆ ಹೇಳಿದ ಶ್ರೀರಾಮಕೃಷ್ಣರ ಮಾತುಗಳನ್ನು ನಾವು ಈಗ ಅಚ್ಚಿನಲ್ಲಿ ಓದಿದಾಗ ಎಂತಹ ಸ್ಫೂರ್ತಿ ದೊರೆಯುತ್ತದೆ, ಅವರಿಗಾಗಿ ಹೇಗೆ ಕಣ್ಣೀರು ಹರಿಯುತ್ತದೆ! ಅವರ ಬಾಯಿಂದಲೇ ಕೇಳಿದ, ಆ ಧನ್ಯ ಶಿಷ್ಯಕೋಟಿಗಳ ಮೇಲೆ ಎಂತಹ ಪರಿಣಾಮ ಬೀರಿರಬೇಕು! ಅವರ ದಿವ್ಯನಾಮವನ್ನು ಸದಾ ಹಾಡುವ ಕಿಟ್ಟಿಮೇಷ್ಟ್ರಿಗೂ ನನ್ನ ನಮನಗಳು.



* * * * *

# ಅ ಸ ತ್ಯಾ ಸ ಕ್ತಿ

✍ ಸ್ವಾಮಿ ನಿತ್ಯಸ್ಥಾನಂದ
ಅಧ್ಯಕ್ಷರು, ಶ್ರೀರಾಮಕೃಷ್ಣ ಆಶ್ರಮ, ಮೈಸೂರು

## ಶ್ರೀರಾಮಕೃಷ್ಣರ ದೃಷ್ಟಾಂತ ಕಥೆ

ಶ್ರೀರಾಮಕೃಷ್ಣರು ಒಂದು ಕಥೆ ಹೇಳುತ್ತಾರೆ: ಒಂದು ಕಡೆ ತುಂಬ ಜನ ನೆರೆದಿದ್ದರು. ಒಂದು ಕತ್ತೆಯ ಧ್ವನಿ ಕೇಳಿಬರುತ್ತಿತ್ತು. ಇದನ್ನು ಗಮನಿಸಿದ ಒಬ್ಬ ಸಾಧುವಿಗೆ ಆಶ್ಚರ್ಯವಾಯಿತು. ಕತ್ತೆಗೆ ಏನೋ ತೊಂದರೆಯಾಗಿರಬೇಕು, ಅದಕ್ಕೇ ಅರಚುತ್ತಿರಬೇಕು ಎಂದು ಸಾಧು ಭಾವಿಸಿದ. ಆದರೆ ಇಷ್ಟೊಂದು ಜನ ನೆರೆದಿದ್ದಾರಲ್ಲ, ಏತಕ್ಕೆ? ಈ ಜನರಿಗೆ ಸಾಮಾನ್ಯ ಕತ್ತೆಯ ಬಗ್ಗೆ ಇಷ್ಟೊಂದು ಕಳಕಳಿಯೆ? ಸಾಧುವಿನ ಕುತೂಹಲ ಕೆರಳಿತು. ಅವನು ಜನರ ಮಧ್ಯೆ ದಾರಿ ಮಾಡಿಕೊಂಡು ಮುಂದೆ ಹೋಗಿ ನೋಡಿದರೆ ಅಲ್ಲಿ ಕತ್ತೆಯೇ ಇಲ್ಲ! ಬದಲು ಒಬ್ಬ ವ್ಯಕ್ತಿ ಕತ್ತೆಯಂತೆಯೇ ಕಿರುಚುತ್ತಿದ್ದ, ಒದೆಯುತ್ತಿದ್ದ, ಕುಣಿಯುತ್ತಿದ್ದ ಮತ್ತು ನೋಡುವುದಕ್ಕೂ ಸ್ವಲ್ಪ ಕತ್ತೆಯಂತೆಯೇ ಇದ್ದ! ಅದು ಜನರ ಊಹೆಯೂ ಆಗಿರಬಹುದು. ಒಟ್ಟಿನಲ್ಲಿ ಅವನು ಕತ್ತೆಯಂತೆ ವರ್ತಿಸುವುದನ್ನು ನೋಡಲು ಅಷ್ಟೊಂದು ಜನರು ನೆರೆದಿದ್ದರು. ನಿಜವಾದ ಕತ್ತೆ ಅದನ್ನು ನೋಡಿದ್ದರೂ ಆಶ್ಚರ್ಯಪಡುತ್ತಿತ್ತೇನೊ! ಮುಂದೆ ತಾನು ಮಾನವನಾಗಿ ಹುಟ್ಟಬಹುದೇನೊ ಎಂಬ ಆಶಾಕಿರಣ ಅದರ ಮನಸ್ಸಿನಲ್ಲಿ ಮೂಡುತ್ತಿತ್ತೇನೊ! ಅಥವಾ ಮುಂದೆ ಇವನಿಂದ ನಮ್ಮ ವಂಶವೃದ್ಧಿ ಆಗಬಹುದು ಎಂದೋ ಯೋಚಿಸಿರಬಹುದು. (ಹೀಗೆ ಕತ್ತೆಯಂತೆಯೇ ಅರಚುತ್ತ, ಸಾಯುವಾಗಲೂ ಹಾಗೆಯೇ ಕಿರುಚುತ್ತ ಸತ್ತರೆ ಅವನು ಮುಂದಿನ ಜನ್ಮದಲ್ಲಿ ಕತ್ತೆಯಾಗಿ ಹುಟ್ಟಬೇಕಲ್ಲವೇ?)

ಸಾಧುವು ಅಲ್ಲಿ ನೆರೆದಿದ್ದ ಜನರ ಪೈಕಿ ಒಬ್ಬ ವ್ಯಕ್ತಿಯನ್ನು ಕರೆದು "ನಿನಗೆ ಇದಕ್ಕಿಂತ ವಿಚಿತ್ರವಾದುದನ್ನು ತೋರಿಸುತ್ತೇನೆ, ಬಾ" ಎಂದು ಕರೆದುಕೊಂಡು ಹೋದನು. ರಸ್ತೆಯಲ್ಲಿ ಒಂದು ನಿಜವಾದ ಕತ್ತೆ ಕಾಣಿಸಿತು. ಸಾಧುವು ಅದಕ್ಕೆ ಒಂದು ಹೊಡೆದನು. ನನ್ನಂತಹ ಸಾಧುಪ್ರಾಣಿಗೇ ಈ ಸಾಧು ಹೊಡೆಯುತ್ತಾನಲ್ಲ ಎಂದು ಅದಕ್ಕೆ ತುಂಬ ದುಃಖ ಆಗಿರಬೇಕು. ಅದಕ್ಕೆ ತುಂಬ ಹೊಡೆತ ತಿಂದು ಅಭ್ಯಾಸವಾಗಿದ್ದರೂ, ಈ ಹೊಡೆತದೊಂದಿಗೆ ದುಃಖದ ನೋವು ಸೇರಿಕೊಂಡು, ಯಾವಾಗಲೂ ಕೂಗುವುದಕ್ಕಿಂತ ಹೆಚ್ಚು ಜೋರಾಗಿ ಕೂಗತೊಡಗಿತು — ಮೂರೂ ಸ್ಥಾಯಿಯಲ್ಲಿಯೂ. ಸಾಧುವು ಆ ಕತ್ತೆಯನ್ನು ತೋರಿಸಿ, "ನೋಡಯ್ಯ, ನಿಜವಾದ ಕತ್ತೆಯ ಕೂಗು ಅಂದರೆ ಇದೇ. ಆ ಅನುಕರಣೆಯನ್ನು ನೋಡುವುದಕ್ಕೆ ಅಷ್ಟೊಂದು ಜನ ಸೇರಿದ್ದಾರೆ!" ಆ ವ್ಯಕ್ತಿ ಜುಗುಪ್ಸೆಯಿಂದ, "ಸ್ವಾಮಿಗಳೇ, ಈ ಕತ್ತೆ ನೀವೇ ಇಟ್ಕೊಳ್ಳಿ. ಇದರ ಕಿರಿಚಾಟ ಪ್ರತಿದಿನ ಇದ್ದದ್ದೇ. ನಮಗೆ ಅದೇ ಚಂದ" ಎಂದು ಹೇಳಿ ಹೊರಟು ಹೋದ.

## ನಾವೇನನ್ನು ಇಷ್ಟಪಡುತ್ತೇವೆ?

ಈ ಕಥೆ ಏನನ್ನು ಸೂಚಿಸುತ್ತದೆ ಎಂದರೆ ಮನುಷ್ಯನಿಗೆ ಸತ್ಯಕ್ಕಿಂತ ಅಸತ್ಯವೇ ಇಷ್ಟ ಎಂಬುದನ್ನು. ನಾವೆಲ್ಲರೂ ಸತ್ಯವಂತರು, ಸತ್ಯವನ್ನೇ ಇಷ್ಟಪಡುತ್ತೇವೆ, ಸತ್ಯ ಸಾಕ್ಷಾತ್ಕಾರವೇ ನಮ್ಮ ಗುರಿ ಎಂದು ಘೋಷಿಸುತ್ತೇವೆ. ಆದರೆ ನಾವು ಹೆಚ್ಚಾಗಿ ಬಯಸುವುದು ಅಸತ್ಯವನ್ನೇ. ಇದು ನಿಮಗೆ ಸೋಜಿಗವಾಗಿ ಕಾಣಬಹುದು. ಆದರೆ ನಮ್ಮ ನಡೆನುಡಿಗಳನ್ನು ವಿಶ್ಲೇಷಿಸಿ ನೋಡಿದಾಗ ನಾವು ಅಸತ್ಯವನ್ನು ಪ್ರೀತಿಸುವುದು ಸತ್ಯ (ಅದೊಂದೇ ಸತ್ಯ!) ಎಂಬುದು ತಿಳಿದುಬರುತ್ತದೆ. ಸುಳ್ಳು ಸುದ್ದಿಯನ್ನು ಜನರು ಇಷ್ಟಪಡುವಷ್ಟು ನಿಜವಾದ ಸುದ್ದಿಯನ್ನು ಇಷ್ಟಪಡುತ್ತಾರೆಯೆ? ಸುಳ್ಳು ಸುದ್ದಿ ಎಷ್ಟು ಬೇಗ ಕಿವಿಯಿಂದ ಕಿವಿಗೆ ಹರಡುತ್ತದೆ. ನಿಜವಾದ ಸುದ್ದಿ ಸಪ್ಪೆಯಾಗಿ ಕಾಣುತ್ತದೆ — ಅದು ಹಾಗೆಯೇ ಕಣ್ಮರೆಯಾಗಿಬಿಡುತ್ತದೆ. ಸುಳ್ಳು ಸುದ್ದಿಯ ಹಿಂದಿರುವ ನಿಜಾಂಶ ತಿಳಿದಮೇಲೆ 'ಅಯ್ಯೊ ಇಷ್ಟೇನೇ' ಎಂದು ಅದನ್ನು ಕೈಬಿಟ್ಟುಬಿಡುತ್ತಾರೆ. ವೃತ್ತಪತ್ರಿಕೆಯಲ್ಲಿ ಬರುವ ಪ್ರಧಾನ ಘಟನೆಯನ್ನು ಮಾತ್ರ ನಾವು ಸತ್ಯವೆಂದು ಸ್ವೀಕರಿಸಬಹುದು. ಅದಕ್ಕೆ ಸಂಬಂಧಪಟ್ಟ ವಿವರಣೆಗಳಾವುದೂ ನಂಬಲರ್ಹವಾಗಿರುವುದಿಲ್ಲ. ಆದರೆ ಜನರು ಅವುಗಳ ಬಗ್ಗೆಯೇ ಹೆಚ್ಚು ಮಾತನಾಡುವುದು, ಚರ್ಚಿಸು

ವುದು ಇತ್ಯಾದಿ. ವೀರಪ್ಪನ್ ಸತ್ತು ಹೋದ, ಯಾವುದೋ ರೈಲು ಅಪಘಾತಕ್ಕೆ ಈಡಾಯಿತು ಎಂಬಿತ್ಯಾದಿ ಸುದ್ದಿಗಳು ನಿಜ. ಆದರೆ ಅವಕ್ಕೆ ಸಂಬಂಧಪಟ್ಟ ವಿವಿಧ ಬಗೆಯ ವಿವರಣೆಗಳಾವುದನ್ನೂ ಸಂಪೂರ್ಣ ನೆಚ್ಚುವಂತಿಲ್ಲ. ಘಟನೆಯ ಪ್ರತ್ಯಕ್ಷದರ್ಶಿಗಳೂ ಒಂದೊಂದು ಬಗೆಯ ವಿವರಣೆ ನೀಡುತ್ತಾರೆ. ಸತ್ಯ ಯಾವಾಗಲೂ ಸಪ್ಪೆ ಎಂದು ಅದಕ್ಕೆ ಉಪ್ಪು ಖಾರ ಸೇರಿಸುತ್ತ ಹೋಗುತ್ತಾರೆ. ಈ ಜಗತ್ತೇ ಅಸತ್ಯ, ಅದರಲ್ಲಿ ನಡೆಯುವ ಘಟನೆಗಳೂ ಅಸತ್ಯ. ಈ ಅಸತ್ಯದ ಜೊತೆಗೆ ಇನ್ನಷ್ಟು ಅಸತ್ಯಗಳನ್ನು ಸೇರಿಸುತ್ತ ಹೋಗಿ ಸತ್ಯದಿಂದ ಆದಷ್ಟು ದೂರವಾಗಲು ಪ್ರಯತ್ನಿಸುತ್ತೇವೆ. ಸತ್ಯದ ಬಗ್ಗೆ ಏಕಿಷ್ಟು ತಿರಸ್ಕಾರ?

ಅನೇಕರಿಗೆ ಸುಳ್ಳನ್ನು ಹೇಳುವುದು ಅತ್ಯಂತ ಸ್ವಾಭಾವಿಕ ವಾಗಿರುತ್ತದೆ. ಮಾತುಮಾತಿಗೂ ಏನಾದರೂ ಸುಳ್ಳನ್ನು ಹೇಳುತ್ತಲೇ ಇರುತ್ತಾರೆ. ಅವರ ಮಾತಿನಲ್ಲಿ ಸತ್ಯ ಯಾವುದು ಅಸತ್ಯ ಯಾವುದು ಎಂದು ಹಂಸಕ್ಷೀರನ್ಯಾಯ ಮಾಡುವುದು ಅಸಾಧ್ಯ. ಆದರೆ ತಾವು ಸುಳ್ಳನ್ನು ಹೇಳುತ್ತಿರುವೆವೆಂಬ ಅರಿವೇ ಅವರಿಗೆ ಇಲ್ಲದಿರುವುದು ಆಶ್ಚರ್ಯ. "ನೀವು ತುಂಬ ಸುಳ್ಳು ಹೇಳುತ್ತೀರಿ" ಎಂದು ಅವರಿಗೆ ಹೇಳಿದರೆ, "ಇಲ್ಲವೇ ಇಲ್ಲ" ಎಂದು ಖಡಾಖಂಡಿತವಾಗಿ ಸುಳ್ಳನ್ನು ಹೇಳುತ್ತಾರೆ. ಕೆಲವರು ಕೋಪಿಷ್ಠರು ಇರುತ್ತಾರೆ — ತುಂಬ ಸಿಡಕಲು ಸ್ವಭಾವ ಅವರದು. ಆದರೆ "ನಿಮಗೆ ಸ್ವಲ್ಪ ಕೋಪ ಜಾಸ್ತಿ" ಎಂದು ಅವರಿಗೆ ಹೇಳಿದರೆ "ನನಗೆ ಕೋಪವೇ ಬರುವುದಿಲ್ಲ" ಎಂದು ಕೋಪದಿಂದಲೇ ಹೇಳುತ್ತಾರೆ. ತುಂಬ ಅಹಂಕಾರ ಉಳ್ಳವರು ತಮಗೆ ಅಹಂಕಾರವಿದೆ ಎಂದು ಒಪ್ಪಿಕೊಳ್ಳು ತ್ತಾರೆಯೆ? ತಾವೇನಾಗಿಲ್ಲವೊ ಅದನ್ನೇ ಜನರು ನಂಬಲು ಇಷ್ಟಪಡುತ್ತಾರೆ. ನಮ್ಮ ನೈಜ ದಿವ್ಯಸ್ವರೂಪದ ಮೇಲೆ ಆಗಲೇ ಒಂದು ಮಿಥ್ಯಾವ್ಯಕ್ತಿತ್ವ ಆರೋಪವಾಗಿದೆ. ಅದನ್ನೂ ಮರೆಮಾಚುತ್ತ ಇನ್ನೊಂದು ವ್ಯಕ್ತಿತ್ವವನ್ನು ಹೊರಗೆ project ಮಾಡುತ್ತೇವೆ.

### ಸತ್ಯವನ್ನು ಎದುರಿಸಬೇಕು

ಜನರು ತಮ್ಮ ಬಗೆಗಿನ ಸತ್ಯವನ್ನು ತಿಳಿಯಲು ಇಷ್ಟ ಪಡುವುದಿಲ್ಲ. ಏಕೆಂದರೆ ಅದು ಅವರಿಗೆ ಅಸಂತೋಷ ವನ್ನು ಉಂಟುಮಾಡುತ್ತದೆ. ಅದಕ್ಕಾಗಿಯೇ ಅವರು ತಮ್ಮ ಎಷ್ಟೋ ದೋಷಗಳಿಗೆ ಅಸತ್ಯದ ಮುಸುಕನ್ನು ಹಾಕಿ ಅವು ತಮ್ಮಲ್ಲಿಲ್ಲ ಎಂಬ ಭ್ರಮೆಯಲ್ಲಿಯೇ ಅವರು ತೃಪ್ತಿಯನ್ನು ಕಾಣುತ್ತಾರೆ. ಇದೊಂದು ಆತ್ಮವಂಚನೆ. ಈ ಆತ್ಮವಂಚನೆ ಯಿಂದ ಪಾರಾಗದಿದ್ದರೆ ಆಧ್ಯಾತ್ಮಿಕ ಜೀವದಲ್ಲಿ ನಾವು ಮುಂದುವರಿಯಲಾಗುವುದಿಲ್ಲ, ಅಷ್ಟೇ ಅಲ್ಲ ನಮ್ಮ ಲೌಕಿಕಜೀವನವೂ ಯಥಾರ್ಥ(authentic)ವಾಗಿರುವು ದಿಲ್ಲ. ಹೊರಗಡೆ ಅವರು ಎಷ್ಟೇ ಚೆನ್ನಾಗಿದ್ದರೂ ಏನೊ ಆಂತರಿಕ ಕೊರಗು ಅವರನ್ನು ಕಾಡುತ್ತಿರುತ್ತದೆ. ಬಾಹ್ಯ ಚಟುವಟಿಕೆಗಳ ಮೂಲಕ — ತುಂಬ ಬ್ಯುಸಿಯಾಗಿರು ವುದುದರ ಮೂಲಕ ಅದನ್ನು ಮರೆಯಲು ಪ್ರಯತ್ನಿಸು ತ್ತಾರೆ. ನಮ್ಮನ್ನು ನಾವು ಎದುರಿಸಬೇಕು (We have to face the truth). ನಮ್ಮ ದೋಷಗಳನ್ನೂ ದೌರ್ಬಲ್ಯ ಗಳನ್ನೂ ನಿಷ್ಪಕ್ಷಪಾತವಾಗಿ ವಿಶ್ಲೇಷಿಸಿ ನೋಡಬೇಕು ಮತ್ತು ಅವುಗಳ ಮೇಲೆ ಜಯಸಾಧಿಸಲು ಪ್ರಯತ್ನಿಸಬೇಕು. ಅವುಗಳನ್ನು ಗುರುತಿಸುವುದಕ್ಕೇ ಇಷ್ಟಪಡದಿದ್ದರೆ ಅವು ಗಳನ್ನು ಗೆಲ್ಲುವುದಾದರೂ ಹೇಗೆ!

### ಭ್ರಮಾಲೋಕ

ಭಾವೋದ್ವೇಗಗಳು ಭ್ರಮಾಲೋಕದಲ್ಲಿಯೇ ಇನ್ನೊಂದು ಭ್ರಮಾಲೋಕವನ್ನು ಸೃಷ್ಟಿಸುತ್ತವೆ. ಹಾವಿನ ಭಯದಿಂದಾಗಿ ಹಗ್ಗವು ಹಾವಾಗಿ ಕಾಣಿಸುತ್ತದೆ. ಹಗ್ಗವೇ ಒಂದು ಭ್ರಮೆ, ಹಾವು ಇನ್ನೊಂದು ಭ್ರಮೆ. ಚಿನ್ನ ಬೆಳ್ಳಿಯ ವ್ಯಾಮೋಹ ಶುಕ್ತಿಯಲ್ಲಿ ರಜತಭ್ರಾಂತಿಯನ್ನು ಹುಟ್ಟಿಸುತ್ತದೆ. ತೀವ್ರ ದ್ವೇಷಾಸೂಯೆಗಳು ಇಲ್ಲದ ಶತ್ರುಗಳನ್ನು ಸೃಷ್ಟಿಸುತ್ತವೆ. ನಮ್ಮ ಮೆಚ್ಚಿನ ವಸ್ತು ಕಳುವಾದಾಗ ಕಂಡ ಕಂಡ ವ್ಯಕ್ತಿಗಳೆಲ್ಲ ಕಳ್ಳರಾಗಿ ಕಾಣಿಸುತ್ತಾರೆ. ಒಮ್ಮೆ ಒಬ್ಬ ವ್ಯಕ್ತಿಯ ಕೈಗಡಿಯಾರ ಕಾಣೆಯಾಯಿತು — ಅದು ಇರಬೇಕಾದ ಜಾಗದಲ್ಲಿ ಇರಲಿಲ್ಲ. ಎಷ್ಟು ಹುಡುಕಿದರೂ ಸಿಗಲಿಲ್ಲ. ಅವನು ಕಿಟಕಿಯಿಂದ ಹೊರಗೆ ನೋಡಿದಾಗ ಅಲ್ಲಿ ಒಬ್ಬ ಯುವಕ ಕಾಣಿಸಿದ. ಅವನನ್ನು ನೋಡುತ್ತಿರುವಾಗ ಆತನ ವರ್ತನೆ ನೋಟ ಎಲ್ಲವೂ ಅವನೇ ತನ್ನ ಕೈಗಡಿಯಾರವನ್ನು ಕದ್ದಿರಬೇಕು ಎಂದು ಅನ್ನಿಸಿತು ಆ ವ್ಯಕ್ತಿಗೆ. ಇನ್ನೂ ಸ್ವಲ್ಪ ಹುಡುಕಾಟ ನಡೆಸಿದ ಮೇಲೆ ಒಂದು ಪುಸ್ತಕದ ಕೆಳಗೆ ಕೈಗಡಿಯಾರ ಸಿಕ್ಕಿತು. ಈಗ ಮತ್ತೆ ಆ ಯುವಕನನ್ನು ನೋಡಿದಾಗ ಸರಿಯಾದ ವ್ಯಕ್ತಿಯಾಗಿಯೇ, ಸಭ್ಯವ್ಯಕ್ತಿ ಯಾಗಿಯೇ ಕಾಣಿಸಿದ. ಸಂದೇಹ ಹೇಗೆ ಒಬ್ಬ ಸಭ್ಯವ್ಯಕ್ತಿ ಯನ್ನು ಕಳ್ಳನನ್ನಾಗಿ ಪರಿವರ್ತಿಸಿತು ನೋಡಿ!

## ಭಾವನಾತ್ಮಕ ಅವಲಂಬನೆಯ ಪರಿಣಾಮ

ಒಬ್ಬ ವ್ಯಕ್ತಿಯ ಬಗ್ಗೆ ನಮಗೆ ಅವನು ಒಳ್ಳೆಯವನು ಅಥವಾ ಕೆಟ್ಟವನು ಎಂಬ ದೃಢವಾದ ಅಭಿಪ್ರಾಯವಿದ್ದರೆ, ನಮ್ಮ ಅಭಿಪ್ರಾಯಕ್ಕೆ ಪೂರಕವಾದ ಎಲ್ಲ ವಿಷಯಗಳನ್ನೂ, ಸತ್ಯವಾಗಲಿ, ಅಸತ್ಯವಾಗಲಿ, ನಂಬುತ್ತೇವೆ; ಅದಕ್ಕೆ ವಿರುದ್ಧವಾದುದನ್ನು ಎಷ್ಟೇ ಸತ್ಯವಾದರೂ ನಂಬುವುದೇ ಇಲ್ಲ. ಒಬ್ಬನು ತುಂಬ ಧಾರ್ಮಿಕ ವ್ಯಕ್ತಿ ಎಂಬ ಅಭಿಪ್ರಾಯವಿದ್ದರೆ, ಅವನು ಯಾವುದೊ ದೇವಸ್ಥಾನದ ಕಡೆಗೆ ಹೋಗುವುದನ್ನು ಒಂದೆರಡು ಸಾರಿ ನೋಡಿದರೆ ಸಾಕು. "ಅವನು ಪ್ರತಿದಿನ ದೇವಸ್ಥಾನಕ್ಕೆ ಹೋಗುತ್ತಾನೆ" ಎಂದು ಹೇಳಿಕೊಂಡು ತಿರುಗುತ್ತೇವೆ. ಒಬ್ಬ ವ್ಯಕ್ತಿಯ ಚಾರಿತ್ರ್ಯ ಸರಿಯಿಲ್ಲ ಎಂದು ತಿಳಿದರೆ, ಅವನು ಎಲ್ಲಿಗೆ ಹೋಗುತ್ತಿದ್ದರೂ ಪ್ರಶ್ನಾರ್ಥಕ ಸ್ಥಳಗಳಿಗೆ ಹೋಗುತ್ತಾನೆ ಎಂದೇ ಜನ ಆಡಿಕೊಳ್ಳುತ್ತಾರೆ. ನಾನು ಒಬ್ಬ ವ್ಯಕ್ತಿಯನ್ನು ಭಾವನಾತ್ಮಕವಾಗಿ ಅವಲಂಬಿಸಿದರೆ (emotional dependence), ಆ ವ್ಯಕ್ತಿ ನನ್ನನ್ನೇ ಹೆಚ್ಚು ಮಾತನಾಡಿಸಬೇಕು, ನನಗೇ ಹೆಚ್ಚು ಪ್ರಾಮುಖ್ಯತೆ ಕೊಡಬೇಕು ಎಂದು ಭಾವಿಸುತ್ತೇನೆ. ಇನ್ನೊಬ್ಬ ವ್ಯಕ್ತಿಯೊಡನೆ ಆತ ಹೆಚ್ಚು ಮಾತನಾಡಿದರೆ ಅಥವಾ ಅವನಿಗೆ ಹೆಚ್ಚು ಪ್ರಾಮುಖ್ಯತೆ ಕೊಟ್ಟರೆ ನನಗೆ ಸಹಿಸಲಾಗುವುದಿಲ್ಲ. ಈ ಅಸಹನೆಯಿಂದಾಗಿ, "ಆತ ಯಾವಾಗಲೂ ಅವನೊಡನೆಯೇ ಮಾತನಾಡುತ್ತಿರುತ್ತಾನೆ, ನನ್ನನ್ನು ಮಾತೇ ಆಡಿಸುವುದಿಲ್ಲ" ಎಂದು ಮುಂತಾಗಿ ನನ್ನ ಮನಸ್ಸು ಅಸತ್ಯ ಕಲ್ಪನೆಯಲ್ಲಿ ತೊಡಗುತ್ತದೆ. ಅದನ್ನೇ ಮೆಲಕು ಹಾಕುತ್ತ ಮಂಗವು ಘಾಯವನ್ನು ತುರಿಸಿಕೊಂಡು ಅದನ್ನು ಉಲ್ಬಣಗೊಳಿಸುವಂತೆ ನನ್ನ ಮಾನಸಿಕ ವೇದನೆಯನ್ನು ಹೆಚ್ಚಿಸಿಕೊಳ್ಳುತ್ತೇನೆ.

## ಪ್ರತಿಬಿಂಬವೇ ಹೆಚ್ಚು ಪ್ರಿಯ?

ದೂರದರ್ಶನವೆಂದರೆ ಎಲ್ಲರಿಗೂ ಇಷ್ಟ. ದೂರದರ್ಶನದಲ್ಲಿ ಬರುವ ವ್ಯಕ್ತಿಗಳು, ದೃಶ್ಯಗಳು ಅಸತ್ಯವಾದರೂ ಅವನ್ನು ಇಷ್ಟಪಡುವಷ್ಟು ನಾವು ನಮ್ಮ ಸುತ್ತಲಿನ ವ್ಯಕ್ತಿಗಳನ್ನೂ ಘಟನೆಗಳನ್ನೂ ಇಷ್ಟಪಡುವುದಿಲ್ಲ — ಅವು ದುರ್ದರ್ಶನಗಳಾಗುತ್ತವೆ. ನಮಗೆ ನಿಜಜೀವನಕ್ಕಿಂತ ಟಿ.ವಿ.ಯಲ್ಲಿ ಕಾಣುವ ಅಸತ್ಯಜೀವನವೇ ಪ್ರಿಯ. ಅದು ನಮಗೆ ಪ್ರಿಯವಾಗಿರುವುದು ನಿಜಜೀವನದ ಪ್ರತಿಬಿಂಬವಾಗಿರುವುದರಿಂದ, ನಾವು ನಿಜಜೀವನವನ್ನು ಪ್ರೀತಿಸುವುದರಿಂದ ಅದನ್ನು ಪ್ರೀತಿಸುತ್ತೇವೆ — ಎಂದು ಆಕ್ಷೇಪಿಸಬಹುದು. ಜನರು ನಿಜಜೀವನವನ್ನು ನಿಜವಾಗಿಯೂ ಪ್ರೀತಿಸುತ್ತಿದ್ದರೆ ಈ ಆಕ್ಷೇಪಣೆಯೂ ನಿಜವಾಗಿರಬಹುದಿತ್ತು. ಆದರೆ ಯಥಾರ್ಥ ಸ್ಥಿತಿ ಹಾಗಿಲ್ಲ. ಜನರು ನಿಜಜೀವನದಿಂದ ದೂರವಾಗಲು ಇಷ್ಟಪಡುತ್ತಾರೆ, ಅದರಿಂದಲೇ ದೂರದರ್ಶನವನ್ನು ಇಷ್ಟಪಡುತ್ತಾರೆ, ದೂರವಾಣಿಯನ್ನು (mobile phone) ಇಷ್ಟಪಡುತ್ತಾರೆ. ಎದುರಿಗೆ ಕಾಣುವ ಸುಂದರ ದೃಶ್ಯಗಳನ್ನು ನೋಡಿ ಆನಂದಿಸುವ ಬದಲು ಅದರ ಫೋಟೋ ತೆಗೆಯುವುದರಲ್ಲೇ ಜನರಿಗೆ ಆಸಕ್ತಿ. ಆ ಫೋಟೋವನ್ನು ಇನ್ನೂ ಉತ್ತಮಪಡಿಸುವುದು ಹೇಗೆ, ಅದು ಯಥಾರ್ಥ ದೃಶ್ಯಕ್ಕಿಂತ ಉತ್ತಮವಾಗಿ ಕಾಣುವಂತೆ ಮಾಡುವುದು ಹೇಗೆ ಎಂಬುದರಲ್ಲೇ ಮಗ್ನರಾಗಿ ಯಥಾರ್ಥ ದೃಶ್ಯವನ್ನು ಸಂಪೂರ್ಣ ಕಡೆಗಣಿಸುತ್ತೇವೆ. ಈಗ ಕಂಪ್ಯೂಟರ್ ತಂತ್ರಜ್ಞಾನದ ಮೂಲಕ ಯಥಾರ್ಥ ದೃಶ್ಯವನ್ನು ವಿಕೃತಗೊಳಿಸುವುದೇ ಒಂದು ದೊಡ್ಡ ಕಲೆಯಾಗಿದೆ. ಹೀಗೆ ಅಸತ್ಯದ ಕಡೆಗೆ ನಮ್ಮ ಒಲವನ್ನು ಹೆಚ್ಚಿಸುತ್ತ ಹೋಗುತ್ತೇವೆ. ಹಾಗೆಯೇ ಅನೇಕರಿಗೆ ಸಂಗೀತವನ್ನು ನೇರವಾಗಿ (live performance) ಕೇಳುವುದಕ್ಕಿಂತ ಅದರ ರಿಕಾರ್ಡ್ ಕೇಳುವುದೇ ಇಷ್ಟ. ಧ್ಯಾನ ಮಾಡುವುದಕ್ಕಿಂತ ಧ್ಯಾನದ ಬಗ್ಗೆ ಕ್ಯಾಸೆಟ್ ಕೇಳಲು ಜನರು ಇಷ್ಟಪಡುತ್ತಾರೆ. ನಿಜವಾದ ಇಂಟೆಲಿಜೆಂಸ್‌ಗಿಂತ ಆರ್ಟಿಫಿಷಿಯಲ್ ಇಂಟೆಲಿಜೆಂಸ್ (A.I.) ಕಡೆಗೇ ಜನರ ಒಲವು. ಹೀಗಾಗಿ I.T. ಬೆಳೆಯುತ್ತಿದೆ, T.I. (true intelligence) ದೂರವಾಗುತ್ತಿದೆ.

## 'ನಾನು'ವಿಗಾಗಿ ಸತ್ಯದ ಬಲಿ

ಸತ್ಯದ ಬಗ್ಗೆ ಪ್ರತಿಯೊಬ್ಬರಿಗೂ ತಮ್ಮದೇ ಆದ ಅಭಿಪ್ರಾಯ(opinion)ವಿರುತ್ತದೆ. ಕ್ರಮೇಣ ಸತ್ಯಕ್ಕಿಂತ ಅಭಿಪ್ರಾಯವೇ ಪ್ರಧಾನವಾಗಿ, ಆ ಅಭಿಪ್ರಾಯಕ್ಕಾಗಿ ಸತ್ಯವನ್ನೇ ಬಲಿಕೊಡಲು ಸಿದ್ಧರಾಗಿರುತ್ತಾರೆ. ಅಭಿಪ್ರಾಯ ಸಮರ್ಥನೆಯ ವಾದದಲ್ಲಿ ಎದುರಾಳಿಯನ್ನು ಬಾಯಿ ಮುಚ್ಚಿಸುವುದೇ ಪ್ರಧಾನವಾಗಿ ನಿಜವಾದ ಸತ್ಯ ಬೇಡವಾಗಿಬಿಡುತ್ತದೆ. ಒಂದು ಆಡು ಬೇರೆಯವರ ಹೊಲದಲ್ಲಿ ಮರಿ ಹಾಕುತ್ತದೆ. ಆ ಹೊಲದ ಯಜಮಾನ, ಅದು ತನ್ನ

ಹೊಲದಲ್ಲಿ ಮರಿ ಹಾಕಿರುವುದರಿಂದ ಮರಿ ತನಗೆ ಸೇರಿದ್ದು ಎಂದು ಹೇಳಿದ. ಆಡಿನ ಯಜಮಾನ ಸ್ವಾಭಾವಿಕವಾಗಿ ಅದು ತನಗೆ ಸೇರಿದ್ದು ಎಂದು ವಾದಿಸಿದ. ಮಾತು ಜಗಳವಾಯಿತು. ಕೊನೆಗೆ ಇಬ್ಬರೂ ಮರಿಯನ್ನು ತೆಗೆದುಕೊಂಡು ಹೋಗಲು ಅದನ್ನು ಹಿಡಿದುಕೊಂಡು ಎಳೆದಾಡಿದರು. ಪರಿಣಾಮವಾಗಿ ಮರಿ ಸತ್ತು ಹೋಯಿತು. ಹೀಗೆ ನಾವು ಸತ್ಯಕ್ಕಾಗಿ ಹೊಡೆದಾಡುತ್ತ ಸತ್ಯವನ್ನೇ ಕಳೆದುಕೊಳ್ಳುತ್ತೇವೆ.

ನಾವು ನಿಜವಾಗಿ ಸತ್ಯವನ್ನು ಪ್ರೀತಿಸುವುದಿಲ್ಲ, ನಾವು ಪ್ರೀತಿಸುವುದು ನಮ್ಮನ್ನು. ಆದ್ದರಿಂದಲೇ ನಮ್ಮ ಅಭಿಪ್ರಾಯ ನಮಗೆ ಅಷ್ಟೊಂದು ಪ್ರಿಯವಾಗುವುದು. ಈ 'ನಾನು' ಎನ್ನುವುದು ಎಲ್ಲರಿಗೂ ಅತ್ಯಂತ ಪ್ರಿಯ. ಅದನ್ನು ಅತ್ಯಂತ ಆದರದಿಂದ ಪಾಲಿಸುತ್ತೇವೆ. ಹೆಸರು ಕೀರ್ತಿ ಪ್ರಶಂಸೆ ಇತ್ಯಾದಿ ಆಹಾರವನ್ನು ಇತ್ತು ಅದನ್ನು ಪೋಷಿಸುತ್ತೇವೆ. ಯಾರೂ ನೋಯಿಸಬಾರದೆಂದು ಅದನ್ನು ಬಹಳ ಎಚ್ಚರಿಕೆಯಿಂದ ರಕ್ಷಿಸುತ್ತೇವೆ. ಅದಕ್ಕಾಗಿಯೇ ಒಂದು ರಕ್ಷಣಾದಳವನ್ನು ನಿರ್ಮಿಸುತ್ತೇವೆ. ಯಾರಾದರೂ ಸ್ವಲ್ಪ ನಿಂದಿಸಿದರೆ ಸಾಕು, ನಮ್ಮ ದೋಷವನ್ನು ಎತ್ತಿ ತೋರಿಸಿದರೆ ಸಾಕು, ಅದರ ವಿರುದ್ಧ ಹೋರಾಡಲು ರಕ್ಷಣಾದಳ ಸಿದ್ಧವಾಗಿರುತ್ತದೆ. ಇಷ್ಟೆಲ್ಲ ಕಷ್ಟಪಟ್ಟು ಸಾಕಿ ಸಲಹುತ್ತಿರುವ ಈ 'ನಾನು' ಎಲ್ಲಿದೆ? ಅದನ್ನು ಹುಡುಕುತ್ತ ಹೋದರೆ ಅದರ ಅಸ್ತಿತ್ವವೇ ನಮಗೆ ಸಿಕ್ಕುವುದಿಲ್ಲ. ಇದನ್ನು ಪ್ರತಿಯೊಬ್ಬರೂ ತಮಗೆ ತಾವೇ ಕಂಡುಕೊಳ್ಳಬಹುದು. ಇಲ್ಲದ ವಸ್ತುವಿಗಾಗಿ ಇಷ್ಟೆಲ್ಲ ಹೋರಾಟ, ಸಡಗರ, ಸಂಭ್ರಮ. ಈ 'ನಾನು' ಎಂಬ ಅಸತ್ಯವನ್ನು ನಾವು ಪ್ರೀತಿಸುವಷ್ಟು ಮತ್ತಾವುದನ್ನೂ ನಾವು ಪ್ರೀತಿಸುವುದಿಲ್ಲ, ಅದರಲ್ಲಿರುವಷ್ಟು ಆಸಕ್ತಿ ನಮಗೆ ಮತ್ತಾವುದರಲ್ಲಿಯೂ ಇಲ್ಲ.

**ಚಿತ್ತವೃತ್ತಿಗಳ ನಿವಾರಣೆ**

ಚಿತ್ತವೃತ್ತಿಗಳ ನಿರೋಧವಾದಾಗ ನೋಡುವವನು (ದ್ರಷ್ಟೃವು) ತನ್ನ ಸ್ವರೂಪದಲ್ಲಿ ನೆಲೆನಿಲ್ಲುತ್ತಾನೆ ಎಂದು ಪತಂಜಲಿ ಹೇಳುತ್ತಾರೆ. ಚಿತ್ತವೃತ್ತಿಗಳ ಮೂಲಕ ಬರುವ ಇಡೀ ದೃಶ್ಯ ಜಗತ್ತನ್ನು ನೋಡಿ ಅನುಭವಿಸುವವನು ದ್ರಷ್ಟೃ. ಈ ರೀತಿ ನೋಡಿ ಅನುಭವಿಸುವುದನ್ನು ಬಿಟ್ಟಾಗ ಅವನು ತಾನು ಚೈತನ್ಯಸ್ವರೂಪ ಎಂಬುದನ್ನು ಸಾಕ್ಷಾತ್ಕರಿಸಿಕೊಂಡು ಮತ್ತೆ ಈ ದೃಶ್ಯಕ್ಕೆ ವಶನಾಗುವುದಿಲ್ಲ. ಆದರೆ ಅವನು ತನ್ನ ಸ್ವರೂಪವನ್ನು, ತನ್ನ ಸತ್ಯವನ್ನು ಅರಿಯಬೇಕಾದರೆ ಚಿತ್ತವೃತ್ತಿಗಳು ನಿಲ್ಲಬೇಕು. ಅವು ನಿಲ್ಲಬೇಕಾದರೆ ಅವುಗಳಲ್ಲಿರುವ ಆಸಕ್ತಿ ಸಂಪೂರ್ಣ ಹೊರಟು ಹೋಗಬೇಕು. ದೃಶ್ಯಜಗತ್ತು ಅಸತ್ಯ, ಅವುಗಳನ್ನು ಪ್ರತಿನಿಧಿಸುವ ಅಥವಾ ಪ್ರತಿಬಿಂಬಿಸುವ ಚಿತ್ತವೃತ್ತಿಗಳೂ ಅಸತ್ಯ. ನಮಗಿರುವ ಅಸತ್ಯಾಸಕ್ತಿಯಿಂದಾಗಿ ಅವುಗಳು ನಮ್ಮನ್ನು ಬಿಟ್ಟುಹೋಗುವುದೇ ಇಲ್ಲ. ಸ್ವಲ್ಪಮಟ್ಟಿಗಾದರೂ ಚಿತ್ತವೃತ್ತಿಗಳ ನಿರೋಧವಾದಾಗ ನಮ್ಮ ಅಂತರಂಗದಲ್ಲಿ ಮಹದಾನಂದವನ್ನು ಅನುಭವಿಸುತ್ತೇವೆ. ಆದರೆ ಸಂಸ್ಕಾರ ಬಲದಿಂದಾಗಿ ನೀರಿನಲ್ಲಿ ಪಾಚಿ ಮುಚ್ಚಿಕೊಳ್ಳುವಂತೆ, ಚಿತ್ತವೃತ್ತಿಗಳು ಬಂದು ಮುತ್ತುತ್ತವೆ. ಶ್ರೀರಾಮಕೃಷ್ಣರು ಒಂದು ಉದಾಹರಣೆಯನ್ನು ಕೊಡುತ್ತಿದ್ದರು. ಒಬ್ಬ ವ್ಯಕ್ತಿಯು ತಾನು ಸಾಕಿದ ನಾಯಿಯನ್ನು ಯಾವಾಗಲೂ ತೊಡೆಯ ಮೇಲೆ ಕೂರಿಸಿಕೊಂಡು ಮುದ್ದಿಸುತ್ತಿದ್ದನು. ಅವನಿಗೆ ಯಾರೊ, "ಆ ರೀತಿ ನಾಯಿಯನ್ನು ತೊಡೆಯ ಮೇಲೆ ಕೂರಿಸಿಕೊಳ್ಳುವುದು ಒಳ್ಳೆಯದಲ್ಲ, ಅದರ ಕಾಯಿಲೆ ನಿನಗೂ ಅಂಟಬಹುದು" ಎಂದು ಹೆದರಿಸಿದರು. ಅಂದಿನಿಂದ ಅವನು ನಾಯಿಯನ್ನು ತೊಡೆಯ ಮೇಲೆ ಕೂರಿಸಿಕೊಳ್ಳುವುದುನ್ನು ಬಿಟ್ಟ. ಆದರೆ ನಾಯಿ ಬಿಡಬೇಕಲ್ಲ, ಅದು ಮತ್ತೆ ಮತ್ತೆ ಅವನ ತೊಡೆಮೇಲೆ ಹಾರಿ ಕುಳಿತುಕೊಳ್ಳುತ್ತಿತ್ತು. ಹಾಗೆಯೇ ನಮಗೆ ಆಸಕ್ತಿಯಿಲ್ಲದಿದ್ದರೂ ಮನಸ್ಸು ಅಷ್ಟು ಸುಲಭವಾಗಿ ಕುಣಿಯುವುದನ್ನು ನಿಲ್ಲಿಸುವುದಿಲ್ಲ.

ಸ್ವಾಮಿ ವಿವೇಕಾನಂದರು ಹೇಳುತ್ತಾರೆ: "ನೀವು ದೇವರನ್ನು ನಿಜವಾಗಿ ಬಯಸುವುದಾದರೆ ದೇವರು ದೊರೆತೇ ದೊರೆಯುತ್ತಾನೆ. ಏಕೆಂದರೆ ನಾವು ಬಯಸುವ ವಸ್ತು ಇರುವುದರಿಂದಲೇ ನಮ್ಮಲ್ಲಿ ಬಯಕೆ ಉಂಟಾಗುವುದು." ಆದ್ದರಿಂದ ಏಕೈಕ ಸತ್ಯವಸ್ತುವಾದ ಭಗವಂತನು ನಮಗೆ ದೊರೆಯದಿದ್ದರೆ, ನಾವು ಸತ್ಯವನ್ನು ಬಯಸುತ್ತಿಲ್ಲ, ಅಸತ್ಯವನ್ನೇ ಬಯಸುತ್ತಿರುವುದು ಎಂದರ್ಥ. ನಾವು ನಮ್ಮ ಅಸತ್ಯಾಸಕ್ತಿಯನ್ನು ತೊರೆದು ಸತ್ಯವನ್ನು ಸತ್ಯವಾಗಿ ಪ್ರೀತಿಸುವುದು ಯಾವಾಗ? ❐

# ಕಿರಿಯ ತತ್ತ್ವಜ್ಞಾನಿ

✍ ಪ್ರೊ. ಜಿ. ವೆಂಕಟಸುಬ್ಬಯ್ಯ

ಶ್ರೀ ಎನ್. ಕೃಷ್ಣಸ್ವಾಮಿಯವರ ಹೆಸರು ಕಿವಿಗೆ ಬಿದ್ದ ಒಡನೆಯೇ ನನಗೆ ನೆನಪಿಗೆ ಬರುವುದು ವಿಜಯ ಕಾಲೇಜಿಗೆ ಕಳೆದ ಶತಮಾನದ ಐದನೆಯ ದಶಕದ ಪ್ರಾರಂಭದಲ್ಲಿ ಉಪಾಧ್ಯಾಯನಾಗಿ ನೇಮಕವಾದ ಯುವಕ ಕಿಟ್ಟಿ ಮೇಷ್ಟು. ಆ ಕಿರಿಯವಯಸ್ಸಿಗಾಗಲೇ 'ಮೇಷ್ಟು' ಎಂಬ ಹೆಸರು ಅವರಿಗೆ ಅಂಟಿದ್ದನ್ನು ಕಂಡು ಆಶ್ಚರ್ಯವಾಯಿತು. ಬಳಿಕ ನನ್ನ ಸಂಶೋಧನೆಯಿಂದ ವ್ಯಕ್ತವಾದ ವಿವರಗಳೇ ಬೇರೆಯಾಯಿತು. ಬೆಂಗಳೂರಿನ ಶ್ರೀರಾಮಕೃಷ್ಣಾಶ್ರಮದಲ್ಲಿ ಬಾಲಕರಿಗೆ ಭಜನೆಗಳನ್ನು ಹೇಳಿ ಕೊಡುತ್ತಿದ್ದ ಪ್ರವೃತ್ತಿಯಿಂದಾಗಿ ಅವರು 'ಕಿಟ್ಟಿ ಮೇಷ್ಟು' ಆಗಿದ್ದರು. ನನ್ನ ಕಿರಿಯಮಗ ರಾಮಕೃಷ್ಣ ಆಶ್ರಮಕ್ಕೆ ಹೋಗಿ-ಬಂದು ಮಾಡುತ್ತಿದ್ದನು. ಅದರಿಂದಾಗಿ ಕಿಟ್ಟಿ ಮೇಷ್ಟ ವಿವರಗಳು ನನಗೆ ಸಾಕಷ್ಟು ದೊರಕಿದವು.

ನಮ್ಮ ಕಾಲೇಜಿನಲ್ಲಿ ಕೃಷ್ಣಸ್ವಾಮಿಯವರು ಅತ್ಯಂತ ಕಿರಿಯ ಉಪನ್ಯಾಸಕರಾಗಿದ್ದುದರಿಂದ ಅವರೊಡನೆ ನಾನು ಬೆರೆಯುವುದು ಸುಲಭವಾಯಿತು. ನಮ್ಮ ಕಾಲೇಜಿನ ಅಧ್ಯಾಪಕರಿಗೆಲ್ಲ ಪ್ರಿನ್ಸಿಪಾಲರಾಗಿದ್ದ ವಿ. ಟಿ. ಶ್ರೀನಿವಾಸ ರನ್ನು ಬಿಟ್ಟರೆ ನಾನೇ ಎಲ್ಲರಿಗಿಂತ ಹಿರಿಯನಾಗಿದ್ದೆ. ಹೀಗಾಗಿ ಕಿರಿಯ ಅಧ್ಯಾಪಕರು ನನ್ನ ಬಳಿಗೆ ಬಂದು ವಿಚಾರವಿನಿಮಯ ಮಾಡಿಕೊಳ್ಳುವುದು ಸಾಮಾನ್ಯ ವಾಗಿತ್ತು. ವಿರಾಮವೇಳೆಗಳಲ್ಲಿ ನಾವು ಕಾಲೇಜಿನ ಹತ್ತಿರದ ವಿದ್ಯಾರ್ಥಿಭವನದಲ್ಲಿ ದೋಸೆ ಮತ್ತು ಕಾಫಿಯ ಸೇವನೆಗೆ ಸೇರುತ್ತಿದ್ದೆವು. ಪ್ರಪಂಚದಲ್ಲಿ ಎಲ್ಲೆಲ್ಲೋ ನಡೆಯುವ ಎಲ್ಲಾ ಘಟನೆಗಳ ಬಗ್ಗೆಯೂ ನಾವು ಚರ್ಚೆ ಮಾಡುತ್ತಿದ್ದೆವು. ನಾನು ಸಾಹಿತ್ಯದ ವಿದ್ಯಾರ್ಥಿಯಾಗಿದ್ದರಿಂದ ನನ್ನ ಮಾತು ಆಗಿಂದಾಗ್ಗೆ ಪ್ರಾಚೀನ ಕವಿಗಳನ್ನು ಕುರಿತು ಇಲ್ಲವೆ ಈಗಿನ ಲೇಖಕರನ್ನು ಕುರಿತು ವಿವರಗಳನ್ನು ತಿಳಿಸುವುದಾಗಿತ್ತು. ಈ ವಿಚಾರವನ್ನು ಆಸಕ್ತಿಯಿಂದ ಕೇಳುವವರಲ್ಲಿ ಕೃಷ್ಣಸ್ವಾಮಿ ಯವರು ಮುಖ್ಯರಾಗಿದ್ದರು. ಆದುದರಿಂದ ನನಗೂ ಅವರಿಗೂ ವಿಶ್ವಾಸ ತುಂಬಿಕೊಂಡಿತು. ಅವರು ಆರಿಸಿ ಕೊಂಡು ಬಂದ ಪ್ರಾರ್ಥನೆಯ ವಿವರಗಳನ್ನು ಅವರಿಗಾಗಿ ನಾನು ಒಂದು ಕವನವನ್ನಾಗಿ ಮಾಡಿಕೊಟ್ಟೆ, ಅದನ್ನು ಅವರು ಚೆನ್ನಾಗಿ ಹಾಡುತ್ತಿದ್ದರು.

ಬಹುಬೇಗ ಕೃಷ್ಣಸ್ವಾಮಿಯವರು ನಮ್ಮ ಕಾಲೇಜನ್ನು ಬಿಟ್ಟು ಬೇರೆ ಕಡೆಗೆ ಉತ್ತಮ ಉದ್ಯೋಗವನ್ನು ಅರಸಿ ಹೊರಟುಹೋದರು. ಸಂಶೋಧನೆ ಅವರ ಆಸಕ್ತಿಯ ವಿಷಯವಾಗಿತ್ತು. ಹಾಗಾಗಿ LRDE ಎಂಬುದು ಅವರಿಗೆ ಅನುಕೂಲಕರವಾದ ವಾತಾವರಣವಾಯಿತು. ಅವರು ಭಾರತದ ಅನೇಕ ಕಡೆಗಳಲ್ಲಿ ವೈಜ್ಞಾನಿಕ ವಿವರಗಳುಳ್ಳ ಸಂಸ್ಥೆಗಳಲ್ಲಿ ಕೆಲಸ ಮಾಡಿಕೊಂಡಿದ್ದು ಕೊನೆಗೆ ಸ್ವಂತ ಇಚ್ಛೆಯಿಂದ ನಿವೃತ್ತರಾಗಿ ಸಾರ್ವಜನಿಕ ಸೇವೆಯಲ್ಲಿ ನಿರತರಾಗಿದ್ದಾರೆ.

ಯುವಕರಿಗೆ ಕನ್ನಡಮಾಧ್ಯಮದಲ್ಲಿ ಪಾಠಪ್ರವಚನ ಮಾಡಿ ಉನ್ನತಶಿಕ್ಷಣಕ್ಕೆ ಅವರನ್ನು ಸಿದ್ಧರನ್ನಾಗಿ ಮಾಡು ವುದು ಉಚಿತವೆಂಬ ಅಭಿಪ್ರಾಯವನ್ನು ಅನುಸರಿಸಿ ಅವರು ವಿವೇಕಾನಂದರ ಹೆಸರಿನ ಒಂದು ಶಾಲೆಯನ್ನು ಕಟ್ಟಿ ಅದಕ್ಕೆ ತಮ್ಮೆಲ್ಲ ಒಲವನ್ನು ಧಾರೆ ಎರೆಯುತ್ತಿದ್ದಾರೆ. ಇದೊಂದು ಸಾರ್ವಜನಿಕ ಸೇವಾಕಾರ್ಯ. ಇದನ್ನು ಎಷ್ಟು ತೀವ್ರಾಭಿಮಾನದಿಂದ ಅವರು ನೆರವೇರಿಸುತ್ತಿದ್ದಾರೆ ಎಂದರೆ, ಸಾಮಾನ್ಯರಿಗೆ ತಿಳಿಯುವುದೇ ಇಲ್ಲ. ಕೀರ್ತಿಗೆ ಮನಸ್ಸುಮಾಡುವ ಜನ ಇಂತಹ ಕೆಲಸವನ್ನು ಮಾಡ ಲಾರರು.

ಭಾರತದ ಯುವಜನತೆ ಹೇಗೆ ಸಿದ್ಧಗೊಳ್ಳಬೇಕೆಂಬು ದಕ್ಕೆ ಅವರೇ ಮಾದರಿ, ಮಾರ್ಗದರ್ಶನ.

ಶಿಕ್ಷಣಕ್ಷೇತ್ರ ಅವರ ಆಸಕ್ತಿಯ ಮತ್ತೊಂದು ಕ್ಷೇತ್ರ. ಇದು ಪರಿಶುದ್ಧವಾಗಿದ್ದು ಪ್ರಾಮಾಣಿಕರಾದ ಉಪಾಧ್ಯಾಯ ರಿಂದ ತುಂಬಿರಬೇಕೆಂದು ಅವರು ಬಯಸುತ್ತಾರೆ.

ಮೀಸಲಾತಿಯಿಂದ ಶಿಕ್ಷಣಕ್ಷೇತ್ರಕ್ಕೆ ಆಗಿರುವ ಅಪಾಯವನ್ನು ಸರಕಾರವೂ ರಾಜಕೀಯ ನಿಪುಣರೂ ಇನ್ನೂ ಅರಿತಿಲ್ಲ. ಆದುದರಿಂದಲೇ ಆ ಕ್ಷೇತ್ರದಲ್ಲಿ ಎಲ್ಲ ಬರಡು ಬರಡಾಗುತ್ತಿದೆ. ಒಬ್ಬಿಬ್ಬರಿಂದ ಈ ಕ್ಷೇತ್ರವನ್ನು ಶುದ್ಧ ಪಡಿಸುವುದು ಆಗದ ಮಾತು. ಅದನ್ನು ಸರಿಪಡಿಸುವುದಕ್ಕೆ ಸಾವಿರಾರು ಯುವಕರು ಆಂದೋಳನವನ್ನು ನಡೆಸಬೇಕು. ರಾಜಕೀಯವು ಈಗಿನಂತೆ ಭ್ರಷ್ಟಾಚಾರದಿಂದ ಕೂಡಿರುವ ತನಕ ಅದು ಸಾಧ್ಯವಿಲ್ಲ. ಇಂಥ ದುರವಸ್ಥೆಯನ್ನು ಸುತ್ತಲೂ ಕಾಣುತ್ತಿದ್ದರೂ, ಎಲ್ಲೋ ಒಂದು ಕಡೆ ಬೆಳಕು ಕಾಣಲಿ ಎಂದು ಏಕಾಕಿಯಾಗಿ ದುಡಿಯುವ ಅವರ ಶ್ರದ್ಧೆಗೆ ನಾವು ನಮಸ್ಕರಿಸಬೇಕು.

ನಮ್ಮ ಕಿಟ್ಟಿಮೇಷ್ಟು ನೂರು ಕಾಲ ಬಾಳಿ ತಮ್ಮ ಸೇವೆಯಿಂದ ದೇಶದ ಪ್ರಗತಿಯನ್ನು ಸಾಧಿಸಲಿ. ಇದು ದೇವರಲ್ಲಿ ನನ್ನ ಪ್ರಾರ್ಥನೆ.



* * * * *

*ಮಗು, ಕೇಳು, ಭಗವಂತ ಮನುಷ್ಯನನ್ನು ಮೊದಲು ಸೃಷ್ಟಿ ಮಾಡಿದಾಗ ಅವನಲ್ಲಿ ಒಳ್ಳೆಯ ಭಾವನೆಗಳನ್ನೇ ತುಂಬಿದ್ದ. ಇದರಿಂದ ಮನುಷ್ಯನಿಗೆ ಹುಟ್ಟುವಾಗಲೇ ವಿವೇಕ ಇರುತ್ತಿತ್ತು. ಜಗತ್ತು ಅಶಾಶ್ವತ ಎನಿಸಲು ಅವನಿಗೆ ಹೆಚ್ಚು ಸಮಯ ಬೇಕಾಗುತ್ತಿರಲಿಲ್ಲ. ಅವನು ತಕ್ಷಣವೇ ಭಗವಂತನ ಸ್ಮರಣೆ ಮಾಡುತ್ತ ಸಾಧನೆಯಲ್ಲಿ ತೊಡಗುತ್ತಿದ್ದ ಮತ್ತು ಜಗತ್ತಿನ ಬಂಧನದಿಂದ ಮುಕ್ತಿಯನ್ನು ಪಡೆಯುತ್ತಿದ್ದ. ಇದನ್ನು ಕಂಡು ಭಗವಂತ ಆಲೋಚಿಸಿದ — "ಓಹೋ! ಹೀಗಿದ್ದರೆ ಸಾಧ್ಯವಿಲ್ಲ. ಮನುಷ್ಯನು ಜೀವನದ ಆಟವನ್ನು ಆಡುವಂತೆ ಮಾಡಲು ಇದು ದಾರಿಯಲ್ಲ." ಹೀಗೆಂದು ಆತ ಒಳ್ಳೆಯತನದೊಂದಿಗೆ ಮನುಷ್ಯನಲ್ಲಿ ಬಹಳಷ್ಟು ಭೋಗದ ಆಸೆಯನ್ನೂ ಪೊಳ್ಳು ಪ್ರತಿಷ್ಠೆಯನ್ನೂ ಸೇರಿಸಿಬಿಟ್ಟ. ಆದಾದ ಮೇಲೆ ನೋಡು, ಜೀವನದ ಆಟ ಸಾಗಿದ್ದೇ ಸಾಗಿದ್ದು !*

* * * * *

*ಮಹಾಮಾಯೆ ಎಂತಹ ಭ್ರಮೆಯನ್ನು ಉಂಟುಮಾಡಿದ್ದಾಳೆ ನೋಡು! ಈ ಪ್ರಪಂಚ ಎಷ್ಟು ದೊಡ್ಡದು! ಮನುಷ್ಯ ಯಾವುದನ್ನು ತನ್ನದು ಅಂದುಕೊಳ್ಳುತ್ತಾನೋ ಅದೂ ಅವನ ಜೊತೆಗೆ ಬರುವುದಿಲ್ಲ. ಆದರೂ ಜನ ಇಷ್ಟು ಸರಳವಾದುದನ್ನು ಅರ್ಥಮಾಡಿಕೊಳ್ಳುವುದಿಲ್ಲವಲ್ಲ!*

* * * * *

*ಮನುಷ್ಯನಿಗೆ ಯಾವ ನೆಂಟರಿಷ್ಟರು ಇಲ್ಲದಿದ್ದರೂ ಒಂದು ಬೆಕ್ಕನ್ನು ಗಂಟುಹಾಕಿಕೊಂಡು ಪ್ರಪಂಚಕ್ಕೆ ಅಂಟಿಕೊಳ್ಳುವಂತೆ ಮಾಡಿಬಿಡುತ್ತಾಳೆ ಮಹಾಮಾಯೆ. ಆಕೆಯ ಲೀಲೆ ಅಂತಹದು.*

* * * * *

*ಈ ಮನುಷ್ಯಜನ್ಮದಲ್ಲಿ ಸುಖ ಎನ್ನುವುದು ಏನೇನೂ ಇಲ್ಲ. ಪ್ರಪಂಚದ ತುಂಬ ದುಃಖವೇ ತುಂಬಿಕೊಂಡಿದೆ. ಇಲ್ಲಿ ಸುಖ ಎನ್ನುವುದು ಬರೀ ಹೆಸರಿಗಷ್ಟೇ. ಯಾರ ಮೇಲೆ ಶ್ರೀರಾಮಕೃಷ್ಣರ ಕೃಪೆ ಆಗಿದೆಯೋ ಅವನಿಗೆ ಮಾತ್ರ ಅವರು ಸ್ವಯಂ ಭಗವಂತನೆಂದು ತಿಳಿಯುತ್ತದೆ. ಮತ್ತು ನೆನಪಿಡು, ಅದೊಂದೇ ನಿಜವಾದ ಸುಖ.*

**- ಶ್ರೀಶಾರದಾದೇವಿ**

## ಆತ್ಮಾವಲೋಕನ - ೧

# ನಾನೇಕೆ ಹಾಡುತ್ತೇನೆ?

✍ ಪ್ರೊ. ಎನ್. ಕೃಷ್ಣಸ್ವಾಮಿ

1940ರ ಸುಮಾರು. ಆಗ ನಾನು ಹೈಸ್ಕೂಲ್ ವಿದ್ಯಾರ್ಥಿ. ಕೆಲವು ತಿಂಗಳಿಂದ ಮಲ್ಲೇಶ್ವರದಲ್ಲಿದ್ದ ರಾಮಕೃಷ್ಣ ವೇದಾಂತ ಕಾಲೇಜಿಗೆ ಹೋಗುತ್ತಿದ್ದೆ. ಸಂಜೆ ಆರತಿ, ಬೆಳಗ್ಗೆ ಯೋಗಾಸನಗಳು. ಮುಂದೆ ವೇದಪಾಠದ ತರಗತಿಗಳು. ಗೀತಾ ಉಪನಿಷತ್ತುಗಳ ಪ್ರವಚನ.

### ಪ್ರವೇಶ

ಮೊದಲು ನಮ್ಮಣ್ಣ ಚಂದ್ರು ಶ್ರೀರಾಮಕೃಷ್ಣ ಸಂಘದ ಈ ಸಂಸ್ಥೆಯಲ್ಲಿ ಸೊಗಸಾದ ಭಜನೆ ನಡೆಯುತ್ತದೆ ಎಂದು ಕಂಡುಹಿಡಿದ. ನನಗೂ ಅದರ ಆಕರ್ಷಣೆ. ಏಕಾದಶಿಯ ರಾಮನಾಮಭಜನೆ. ತೆಂಗಿನಕಾಯಿ ಲಡ್ಡು ಪ್ರಸಾದ. ಸಂಜೆ ಆಟಗಳು. ಸ್ವಾಮಿ ಶ್ರೀವಾಸಾನಂದರು ಕಾಲೇಜಿನ ಪ್ರಿನ್ಸಿಪಾಲ್. ಹದಿನೈದು ಇಪ್ಪತ್ತು ಬ್ರಹ್ಮಚಾರಿಗಳು ವಿದ್ಯಾರ್ಥಿಗಳು. ನಮ್ಮಂತಹ ಕೆಲವರು ಹೊರಗಿನವರೂ ಆರತಿ, ಕೆಲವು ಕ್ಲಾಸುಗಳಿಗೂ ಹೋಗುತ್ತಿದ್ದೆವು. ಶ್ರೀವಾಸಾನಂದರು ಟೂರ್ ಹೋದಾಗ ಸ್ವಾಮಿ ಓಜಸಾನಂದರು ಕಾಲೇಜಿನ ಮುಖ್ಯಸ್ಥರಾಗಿದ್ದರು. ಶ್ರೀವಾಸಾನಂದರ ನಂತರ ಇವರೇ ಪ್ರಿನ್ಸಿಪಾಲ್ ಆದರು. ಶ್ರೀವಾಸಾನಂದರು ಶ್ರೀಶಾರದಾಮಾತೆಯವರ ಶಿಷ್ಯರು. ಓಜಸಾನಂದರು ನಿರ್ಮಲಾನಂದರ ಶಿಷ್ಯರು. ಒಂದು ದಿನ ಸ್ವಾಮಿ ಓಜಸಾನಂದರು ನನ್ನನ್ನು ಕೇಳಿದರು, "ನೀನು ಆರತಿ ಹಾಡುಗಳನ್ನು ಚೆನ್ನಾಗಿ ಹಾಡುತ್ತೀಯೆ. ಬೇರೆ ಯಾವುದಾದರೂ ಹಾಡು ಬರುತ್ತದೆಯೋ?" "ಬರುತ್ತದೆ" ಎಂದೆ.

ಒಂದು ಹಾಡು ಹೇಳು ಎಂದರು. ಆಗ ನನಗೆ ಬರುತ್ತಿದ್ದುದೆಲ್ಲ ಸಿನಿಮಾ ಹಾಡುಗಳು. ಅದರಲ್ಲೂ ಕೆ. ಎಲ್. ಸೈಗಲ್ ಹಾಡುಗಳು ನನಗೆ ಬಹು ಇಷ್ಟ. 'ಬಾಲಮ ಆಯ ಬಸೋ ಮೋರೆ ಮನ ಮೇ' ಹಾಡಿದೆ. ಓಜಸಾನಂದರು "ಚೆನ್ನಾಗಿ ಹಾಡುತ್ತೀ, ಆದರೆ ನಿನಗೆ ಭಜನೆ ಯಾವುದೂ ಬರುವುದಿಲ್ಲವೆ?" ಎಂದು ಕೇಳಿದರು. "ಇಲ್ಲ" ಎಂದೆ. "ಕಲಿತುಕೊಳ್ಳುವೆಯ?" ಎಂದರು. "ಹೇಳಿಕೊಟ್ಟರೆ ಕಲಿಯುತ್ತೇನೆ" ಎಂದೆ.

### ಸ್ವಾಮಿ ಅನುಪಮಾನಂದ

ಓಜಸಾನಂದರು ನನ್ನನ್ನು ಒಬ್ಬ ವಯಸ್ಸಾದ ಬಂಗಾಲೀ ಸ್ವಾಮಿಗಳಿಗೆ ಪರಿಚಯ ಮಾಡಿದರು. ಅವರ ಹೆಸರು ಸ್ವಾಮಿ ಅನುಪಮಾನಂದ. ನಾನು ಅವರನ್ನು ನೋಡಿಯೇ ಇರಲಿಲ್ಲ. ನಾಲ್ಕೈದು ಹಾಡು ಹೇಳಿಕೊಟ್ಟರು, 'ಮೂರ್ತಮಹೇಶ್ವರಮುಜ್ವಲ', 'ಭವ ಸಾಗರ ತಾರಣ', 'ಭವ ಭಯ ಭಂಜನ', 'ರಾಮಕೃಷ್ಣ ಶ್ಯಾಮ ಶ್ಯಾಮಾ ಶಿವೇ'. ಕೆಲವು ದಿನಗಳ ನಂತರ ಅನುಪಮಾನಂದರು ಬೇಲೂರು ಮಠಕ್ಕೆ ವಾಪಸಾದರು. ಆಮೇಲೆ ಬಹುಕಾಲ ಬದುಕಿದ್ದರು. ಆದರೆ ನಾನು ನಂತರ ಅವರನ್ನು ನೋಡಲೇ ಇಲ್ಲ.

ಆಮೇಲೆ ಇತರ ಸ್ವಾಮಿಗಳಿಂದ ಆಗಾಗ ಒಂದೊಂದೇ ಹಾಡು ಕಲಿತೆ. ಸ್ವಾಮಿ ಪಾವನಾನಂದ — ಶಂಭು ಮಹಾರಾಜ್ 'ತಾ ಥೈಯ್ಯಾ ತಾ ಥೈಯ್ಯಾ ನಾಚೇ ಭೋಲಾ' ಪರಿಚಯ ಮಾಡಿದರು. ಆಗ ಬಸವನಗುಡಿ ರಾಮಕೃಷ್ಣಾಶ್ರಮದಲ್ಲಿ ಯಾವ ಕಾರ್ಯಕ್ರಮ ನಡೆದರೂ ಮೊದಲು ಹಾಡಲು ನನಗೆ ಕರೆ ಬರುತ್ತಿತ್ತು. ನನ್ನೊಡನೆ ನನ್ನ ತರಗತಿಯಲ್ಲೇ ಮಲ್ಲೇಶ್ವರಂ ಹೈಸ್ಕೂಲಿನಲ್ಲಿ ಓದುತ್ತಿದ್ದ ಶ್ರೀನಿವಾಸಮೂರ್ತಿಯೂ ಹಾಡುತ್ತಿದ್ದ. ಅವನಿಗೂ ಒಳ್ಳೆಯ ಕಂಠ. ಹೆಚ್ಚು ಹಾಡುಗಳು ಬರುತ್ತಿರಲಿಲ್ಲ. ಗೊತ್ತಿದ್ದನ್ನೇ ಹಾಡುತ್ತಿದ್ದೆವು. 'ಮೂರ್ತಮಹೇಶ್ವರ' ಎಷ್ಟು ಹಾಡಿದರೂ ನಮಗೆ ತೃಪ್ತಿ ಇಲ್ಲ.

ಕ್ರಮೇಣ ಹಾರ್ಮೋನಿಯಂ ನುಡಿಸುವುದನ್ನು ಕಲಿತು ಕೊಂಡೆ— ಯಾರೂ ಹೇಳಿಕೊಡಲಿಲ್ಲ; ಸ್ವಯಮಾಚಾರ್ಯ ಪುರುಷ. ವೇದಾಂತ ಕಾಲೇಜಿನಲ್ಲಿ ನಾನೇ ಸಂಜೆ ಆರತಿಯ ಹಾಡುಗಳನ್ನು ಹಾಡುವುದರಲ್ಲಿ ಮುಖ್ಯಸ್ಥನಾದೆ.

1948ರಲ್ಲಿ ನಾನು ವಿಜಯ ಕಾಲೇಜಿನಲ್ಲಿ ಲೆಕ್ಚರರ್ ಆಗಿ ನಿಯುಕ್ತನಾಗಿ ಬಸವನಗುಡಿಯಲ್ಲಿ ಮನೆ ಮಾಡಿದೆ. ಈಗ ಬಸವನಗುಡಿಯ ಆಶ್ರಮದಲ್ಲಿ ನನ್ನ ಸೇವೆ ಪ್ರತಿನಿತ್ಯ ನಡೆಯಲಾರಂಭವಾಯಿತು. ಆ ವೇಳೆಗೆ ವೇದಾಂತ ಕಾಲೇಜ್ ಊಟಿ-ಮಂಗಳೂರಿಗೆ ಪ್ರಯಾಣ ಮಾಡಿ

ಕೊನೆಗೆ ಅದು ಮಂಗಳೂರು ರಾಮಕೃಷ್ಣ ಆಶ್ರಮವಾಗಿ ಪರಿವರ್ತನೆ ಆಯಿತು.

**ಸತ್ಯನಾರಾಯಣ ಮಹಾರಾಜ್**

ಆಗ ಆಶ್ರಮದ ಸಂಜೆ ಪ್ರಾರ್ಥನೆಯನ್ನು ಬ್ರಹ್ಮಚಾರಿ ಸತ್ಯನಾರಾಯಣರವರು ನಡೆಸುತ್ತಿದ್ದರು. ನಾನು ಅವರೊಡನೆ ಸೇರಿಕೊಂಡಮೇಲೆ ದಿನಾ ಆರತಿ ಹಾಡುಗಳ ನಂತರ ಒಂದೆರಡು ಹಾಡುಗಳನ್ನು ಹಾಡುವ ಪದ್ಧತಿ ಆರಂಭಿಸಿದೆವು.

ಮೊದಲು ಈಗ ಶ್ರೀರಾಮಕೃಷ್ಣ ದೇವಸ್ಥಾನ ಇರುವ ಕೊಠಡಿಯೇ ನಮ್ಮ ಪ್ರಾರ್ಥನಾಮಂದಿರವಾಗಿತ್ತು. ಈಗ ಶ್ರೀಶಾರದಾದೇವಿಯವರ ಮಂದಿರ ಇರುವ ಕೋಣೆಯೇ ಶ್ರೀರಾಮಕೃಷ್ಣಮಂದಿರವಾಗಿತ್ತು. ಮೊದಲು ಆ ಸಣ್ಣ ಕೋಣೆಯೇ ಬರುತ್ತಿದ್ದ ಕೆಲವು ಭಕ್ತರಿಗೆ ಕುಳಿತುಕೊಳ್ಳಲು ಸಾಕಾಗಿತ್ತು. ಅಧ್ಯಕ್ಷರಾದ ಸ್ವಾಮಿ ತ್ಯಾಗೀಶಾನಂದರು ಹೊರಗೆ ವರಾಂಡದಲ್ಲಿದ್ದ ಜಗುಲಿಯ ಮೇಲೆ ಕುಳಿತು ಧ್ಯಾನಾಸಕ್ತರಾಗಿರುತ್ತಿದ್ದರು.

ನಮ್ಮ ಪ್ರಾರ್ಥನೆಯ ಹಾಡುಗಳು ಹೆಚ್ಚು ಆಕರ್ಷಕ ವಾಗಿ ಹೆಚ್ಚಿನ ಸಂಖ್ಯೆಯಲ್ಲಿ ಜನ ಆರತಿಗೆ ಬರಲಾರಂಭಿಸಿ ದರು. ಆಗ ನಾವು ವರಾಂಡದ ಜಗುಲಿಯ ಮೇಲೆ ಕುಳಿತು ಹಾಡುತ್ತಿದ್ದೆವು. ಒಳಗಿನ ಕೊಠಡಿಯಲ್ಲಿ ದೇವಸ್ಥಾನದ ಮುಂದೆ ಸ್ತ್ರೀಭಕ್ತರು ಕುಳಿತುಕೊಳ್ಳುತ್ತಿದ್ದರು.

ಸ್ವಾಮಿ ತ್ಯಾಗೀಶಾನಂದರ ನಿಧನದ ನಂತರ 1953ರಲ್ಲಿ ಸ್ವಾಮಿ ಯತೀಶ್ವರಾನಂದರು ಬೆಂಗಳೂರು ಆಶ್ರಮದ ಅಧ್ಯಕ್ಷರಾಗಿ ಬಂದರು. ಅವರು ಹೆಚ್ಚು ಜನ ಪ್ರಾರ್ಥನೆಗೆ ಬರುತ್ತಿದ್ದುದನ್ನು ಕಂಡು ಆಶ್ರಮದಲ್ಲಿ ಈಗ ಇರುವ ಪ್ರಾರ್ಥನಾಮಂದಿರವನ್ನು ಕಟ್ಟಿಸಿದರು. ಕೆಲವು ದಿನ ದನದ ಕೊಟ್ಟಿಗೆಯಾಗಿದ್ದ ಒಂದು ಕಟ್ಟಡದಲ್ಲಿ ಪೂಜೆ-ಆರತಿ-ಪ್ರಾರ್ಥನೆ ನಡೆದವು. "ಕಿಟ್ಟಿ, ಆಶ್ರಮದ ಪ್ರಾರ್ಥನೆ ಚೆನ್ನಾಗಿ ಮಾಡು, ಹೆಚ್ಚು ಜನ ಭಕ್ತರಿಗೆ ಉಪಯೋಗ ವಾಗಲಿ" ಎಂದು ನನಗೆ ಹೇಳಿದರು.

1953ರಲ್ಲಿ ಸ್ವಾಮಿ ಯತೀಶ್ವರಾನಂದರ ಆಶೀರ್ವಾದ ದೊಡನೆ 'ಕೀರ್ತನ ಸಂಗ್ರಹ'ದ ಮೊದಲ ಆವೃತ್ತಿಯನ್ನು ಸಂಪಾದಿಸಿ ಮುದ್ರಿಸಿದೆ. ಅದಕ್ಕೆ ಬ್ರಹ್ಮಚಾರಿ ಸತ್ಯನಾರಾಯಣ, ಬ್ರಹ್ಮಚಾರಿ ಸುಂದರಕೃಷ್ಣ ಇವರ ಸಹಕಾರ ಇದ್ದೇ ಇತ್ತು. ಈಗ ಅದರ ಇಪ್ಪತ್ತೋ ಏನೋ ಪುನರಾವೃತ್ತಿಗಳಲ್ಲಿ ಲಕ್ಷಾಂತರ ಪ್ರತಿಗಳು ಮಾರಾಟ ವಾಗಿವೆ. ಸ್ವಾಮಿ ಶ್ರೀವಾಸಾನಂದರು ಮೊದಲು ಪ್ರಕಟಿಸಿದ ಪ್ರಾರ್ಥನೆಯ ಕೈಪಿಡಿ 'ಜ್ಯೋತಿ'ಯೂ ಹಲವು ಸಲ ಪುನರ್ಮುದ್ರಣವಾಗಿದೆ.

**ಸ್ವಾಮಿ ಧೀರೇಶಾನಂದ**

1950ರ ಸುಮಾರಿನಲ್ಲಿ ಮೈಸೂರು ಆಶ್ರಮದ ಪೂಜಾರಿ ಆಗಿದ್ದ ಸ್ವಾಮಿ ಧೀರೇಶಾನಂದರ ಪರಿಚಯ ವಾಯಿತು. ಆಮೇಲೆ ತಿಳಿಯಿತು, ಅವರು ಸ್ವಾಮಿ ಶಾರದಾನಂದರ ಶಿಷ್ಯರು ಎಂದು. ಸ್ವಾಮಿ ಶಿವಾನಂದರ ಆಪ್ತರು. ತಮ್ಮ ಮೃದುವಾದ ಕಂಠದಲ್ಲಿ ಸುಂದರವಾಗಿ ಹಾಡುತ್ತಿದ್ದರು. ಮೈಸೂರಿಗೆ ಹೋದಾಗಲೆಲ್ಲ ಅವರೊಡನೆ ಕುಳಿತು ಹಾಡುಗಳನ್ನು ಕಲಿತೆ. ಬಂಗಾಳಿ, ಹಿಂದಿ ಭಜನೆಗಳು 'ತುಮಿ ಅಪನಿ ಕರಿಲೇ ಆಪನಾರ ಪೂಜಾ, ಕೇ ತುಮಿ ಬಾಜಾಲೇ, ಕೇ ತುಮಿ ಯತಿ; ಹೇ ಗೋವಿಂದ ಹೇ ಗೋಪಾಲ' ಇತ್ಯಾದಿ. ಸ್ವಾಮಿ ಧೀರೇಶಾನಂದರು ವೇದಾಂತ ಗ್ರಂಥಗಳನ್ನೂ ಬರೆದು ಪ್ರಕಟಿಸಿದ್ದಾರೆ.

ಅವರು ಬೆಂಗಳೂರಿಗೆ ಬಂದಾಗಲೂ ಅವರೊಡನೆ ಹಾಡು ಕಲಿಯಲಾಯಿತು. ಒಂದು ದಿನ ಬೆಳಗ್ಗೆ ಆಶ್ರಮದ ವರಾಂಡದ ಜಗುಲಿಯ ಮೇಲೆ ಕುಳಿತು ಹಾಡುತ್ತಿದ್ದೆವು. ದಶಾವತಾರ ಸ್ತೋತ್ರ. ಇದರ ಪಲ್ಲವಿ, ಜಯ ಜಗದೀಶ ಹರೇ. ಹಾಡುವಾಗ ಅದೇನೋ ಒಂದು ಪಾಶ್ಚಾತ್ಯ ಸಂಗೀತದ ಹಾಡು ಇದ್ದಹಾಗೆ ಇದೆ. ನಾವು ಹಾಡುತ್ತಿದ್ದಾಗ ಸ್ವಾಮಿ ತ್ಯಾಗೀಶಾನಂದರು ಅಲ್ಲಿ ಬಂದರು. ಅವರು ನಾವು ಹಾಡುತ್ತಿದ್ದ ಹಾಗೆಯೇ ಪಾಶ್ಚಾತ್ಯ ಸಂಗೀತದ ಕಂಡಕ್ಟರ್ ಕೈ ಆಡಿಸುವಂತೆ ಕೈಗಳನ್ನು ತಾಳಕ್ಕೆ ಸರಿಯಾಗಿ ಆಡಿಸ ಲಾರಂಭಿಸಿದರು! ಅದು ಅವರ 'ವಿಮರ್ಶೆ'ಯ ವಿಧಾನ. ಇವತ್ತಿಗೂ ನನ್ನ ಸಂಗೀತಕ್ಕೆ ಯಾರಾದರೂ ಗುರು ಇದ್ದರೆ ಅದು ಸ್ವಾಮಿ ಧೀರೇಶಾನಂದರು. ಆದರೆ ಅವರಿಗಿಂತ ಮುಖ್ಯವಾದ ಗುರು 'ರೇಡಿಯೋ'. ನಾನು ರೇಡಿಯೋ ಮೂಲಕ ಕಲಿತ ಹಾಡುಗಳಿಗೆ ಲೆಕ್ಕ ಇಲ್ಲ! ಅದರಲ್ಲಿ ಡಿ ವಿ ಪಲೂಸ್ಕರ್, ಭೀಮಸೇನ ಜೋಷಿ, ಕುಮಾರ ಗಂಧರ್ವ ನನ್ನ ಪ್ರಿಯ ಗಾಯಕರು.

**ಸ್ವಾಮಿ ಪ್ರಿಯಾನಂದ**

1962ರಲ್ಲಿ ನಾನು ಎಲ್.ಆರ್.ಡಿ.ಇ.ಯಿಂದ ಮದರಾಸಿಗೆ ಹೊಸ ಉದ್ಯೋಗ ಅರಸಿಕೊಂಡು ಹೋದೆ. ಡಿಫೆನ್ಸ್ ಇನ್ಸ್‌ಟಿಟ್ಯೂಟ್ ಆಫ್ ಫಿಸಿಯಾಲಜಿ ಅಂಡ್

ಅಲೈಡ್ ಸೈನ್ಸಸ್ — ಡಿಪಾಸ್. ಮದರಾಸು ರಾಮಕೃಷ್ಣ ಮಠದ ಹತ್ತಿರವೇ ಮುರುಡಿ ಲಾಡ್ಜ್ ಎಂಬ ಉಡುಪಿ ಹೋಟಲ್‌ನಲ್ಲಿ ರೂಂ ಮಾಡಿದೆ. ಪ್ರತಿನಿತ್ಯ ಸಂಜೆ ಆರತಿಗೆ ಮಠಕ್ಕೆ ಹೋಗುತ್ತಿದ್ದೆ. ಜೊತೆಗೆ ಅದೇ ಹೋಟಲ್‌ನಲ್ಲಿ ವಾಸಿಸುತ್ತಿದ್ದ ಕೃಷ್ಣನ್‌ನಾಯರ್; ಇವರೂ ಯತೀಶ್ವರಾನಂದರ ಶಿಷ್ಯರು. ಮಠದಲ್ಲಿ ಆರತಿ ನಡೆಸುತ್ತಿದ್ದವರು ವಿಪ್ರದಾಸ್ ಮಹಾರಾಜ್ — ಸ್ವಾಮಿ ಪ್ರಿಯಾನಂದ. ಅನೇಕ ಬಂಗಾಲಿ ಗೀತೆಗಳನ್ನು ಹಾಡುತ್ತಿದ್ದರು. ದುರ್ಗಾಪೂಜೆ ಸಮಯದಲ್ಲಿ ಕಾಳಿಯ ಹಾಡುಗಳನ್ನು ಒಂದು ತಂಡಕ್ಕೆ ಹೇಳಿಕೊಡುತ್ತಿದ್ದರು. ಅವರಿಂದ ಅನೇಕ ಕಾಳಿಯ ಹಾಡುಗಳನ್ನು ಕಲಿತೆ. ಅನೇಕ ಹಾಡುಗಳನ್ನು 'ಸಾಧನ ಸಂಗೀತ' ಎಂಬ ರಾಮಕೃಷ್ಣ ಮಠದ ಬಂಗಾಲೀ ಹಾಡಿನ ಪುಸ್ತಕದ ಸ್ವರ ಲಿಪಿಯ ಮೂಲಕ ಕಲಿತೆ. ಈ ಪುಸ್ತಕದ ಸಂಪಾದಕರು ಸ್ವಾಮಿ ಅಪೂರ್ವಾನಂದರು. ಅವರು ಬೆಂಗಳೂರಿಗೆ ಬಂದಾಗ 'ಅರೂಪ ಸಾಯರೇ' ಎಂಬ ಅದ್ಭುತವಾದ ಹಾಡನ್ನು ಹೇಳಿಕೊಟ್ಟರು.

1952ರಲ್ಲಿ ಬೆಂಗಳೂರಿನಲ್ಲಿ ಸ್ವಾಮಿ ನಿಶ್ರೇಯಸಾನಂದರು ಪರಮಗುರು ಸಿದ್ಧಯೋಗಿ ಮೊದಲಾದ ಒಂದೆರಡು ಹಾಡುಗಳನ್ನು ಕಲಿಸಿದರು. ನನ್ನೊಡನೆ ಕಲಿತವನು ಚನ್ನೇಗೌಡರ ಮಗ ರಾಮು. ಚಿಕ್ಕಂದಿನಲ್ಲಿಯೇ ರಾಮು ಅರ್ಜೆಂಟೈನಕ್ಕೆ ಹೋಗಿ ಆಗಷ್ಟೆ ಭಾರತಕ್ಕೆ ಹಿಂದಿರುಗಿದವನು ಈಚೆಗೆ ತೀರಿಕೊಂಡ.

1967ರಲ್ಲಿ ಮದರಾಸಿನಿಂದ ಮತ್ತೆ ಬೆಂಗಳೂರಿಗೆ ಪ್ರಮೋಶನ್ ಮೇಲೆ ಬಂದು ಎಲ್.ಆರ್.ಡಿ.ಇ. ಸೇರಿದೆ. ಇನ್ನೊಂದು ಪ್ರಮೋಶನ್ ಆದಾಗ ದೆಹಲಿಗೆ ವರ್ಗಾವಣೆ. ಕೊನೆಗೆ ಪೂನಾಕ್ಕೆ ವರ್ಗ. ಅಲ್ಲಿ ಅನೇಕ ಮರಾಠಿ ಪದಗಳನ್ನು ಕಲಿತೆ.

ರಿಟೈರ್ ಆದಮೇಲೆ 1982ರಲ್ಲಿ ಮತ್ತೆ ಬೆಂಗಳೂರಿಗೆ. ನಮ್ಮ ವಿವೇಕಾನಂದ ವಿದ್ಯಾ ಸಂಸ್ಥೆಗೆ ಸೋಮಸುಂದರ ನನ್ನನ್ನು ಬಲವಂತ ಮಾಡಿ ಕಾರ್ಯದರ್ಶಿ ಆಗಿ ಸೇರಿಸಿದ. ಅಲ್ಲಿದ್ದಾಗಲೇ ಕೇಶವಮೂರ್ತಿ ಟಿಕೆಟ್ ತೆಗೆದುಕೊಂಡು ಅಮೆರಿಕಕ್ಕೆ ಬಂದು ಭಜನೆ ಮಾಡಿ ಎಂದು ಹೇಳಿದ. ನಾಲ್ಕು ಸಲ ಅಮೆರಿಕಕ್ಕೆ ಹೋಗಿ ಸಂಪಾದಿಸಿದ ಹಣವನ್ನೆಲ್ಲ ನಮ್ಮ ಶಾಲೆಯ ಕಟ್ಟಡ ಕಟ್ಟಲು ಉಪಯೋಗಿಸಿದೆ.

**ಭಜನೆ ಕ್ಲಾಸ್**

ಸ್ವಾಮಿ ಓಜಸಾನಂದರು ಭಜನೆ ಹಾಡುವುದನ್ನು ಕಲಿತುಕೋ ಎಂದು ಉಪದೇಶ ಮಾಡಿದರು. ಯಾವಾಗಲಾದರೂ ಶಾಸ್ತ್ರೀಯ ಸಂಗೀತ ಕಲಿಯಬೇಕು ಎಂದು ಆಸೆ ಆದರೂ ಭಜನೆಯೇ ನನ್ನ ಗುರಿಯಾಗಿರಬೇಕು ಎಂದು ನಿಶ್ಚಯಿಸಿಕೊಂಡೆ.

ಇಪ್ಪತ್ತು ವರ್ಷಗಳ ಹಿಂದೆ ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್ ಸಂಸ್ಥೆಯಲ್ಲಿ ಒಂದು ಭಜನೆ ಕ್ಲಾಸ್ ಆರಂಭಿಸಿದೆ. ಇದಕ್ಕೆ ಎಂ. ಕೃಷ್ಣಮೂರ್ತಿಯವರು ಇನ್ಸ್ಟಿಟ್ಯೂಟ್‌ನ ಕಾರ್ಯದರ್ಶಿಯಾಗಿದ್ದ ಆನಂದ್ ಕೊಂಡಾಜಿ ಅವರಿಗೆ ಕೊಟ್ಟ ಸೂಚನೆಯೇ ಕಾರಣ. ಈ ತರಗತಿ ವಾರವಾರವೂ ತಪ್ಪದೆ ಪ್ರತಿ ಬುಧವಾರ ಸಂಜೆ ಸೇರಿ ಭಜನೆ ಹಾಡುತ್ತೇವೆ. 15-20 ಜನ ಬರುತ್ತಾರೆ. ಇದು ನನಗೆ ಬಹು ತೃಪ್ತಿಯನ್ನು ಕೊಡುವ ಕಾರ್ಯ.

**ಉದ್ಯಾನದಲ್ಲಿ ಭಜನೆ**

ನಮ್ಮ ಮನೆಯ ಹಿಂದೆ ಒಂದು ಪಾರ್ಕ್ ಇದೆ. ಇಪ್ಪತ್ತು ವರ್ಷಗಳಿಗೂ ಮೊದಲಿನಿಂದ ಪ್ರತಿದಿನ ಬೆಳಗ್ಗೆ ಇಲ್ಲಿ ವಾಯುಸಂಚಾರಕ್ಕೆ ಹೋಗುತ್ತೇನೆ. ಸುಮ್ಮನೆ ನಡೆಯುವುದಿಲ್ಲ. ಸ್ತೋತ್ರ, ನಾಮಾವಳಿಗಳನ್ನು ಹೇಳಿಕೊಂಡು ತಿರುಗಾಡುತ್ತಾ ಇರುತ್ತೇನೆ. ಅಲ್ಲಿ ಸೇರುವ ಸ್ನೇಹರಂಗ ಎಂಬ ಗುಂಪಿನ ಗೋಪಿ ಮೊದಲಾದವರು ನನ್ನನ್ನು ಅಧ್ಯಕ್ಷನನ್ನಾಗಿ ಆರಿಸಿದರು. ಆಮೇಲೆ ನಾಲ್ಕು ವರ್ಷಗಳಿಂದ ಈ ಸಂಘದಲ್ಲಿ ವಾರಕ್ಕೊಂದು ಸಲ, ಸೋಮವಾರ ಬೆಳಗ್ಗೆ 6.15ರಿಂದ ಕಾಲುಘಂಟೆ ಭಜನೆ ಮಾಡುತ್ತೇವೆ. ಇದೂ ನನಗೆ ಇಷ್ಟವಾದ ಒಂದು ಕಾರ್ಯಕ್ರಮ. ಪಾರ್ಕಿನಲ್ಲಿ ದೇವರ ಸನ್ನಿಧಿಯಲ್ಲಿ ಭಜನೆ!

ಇದಲ್ಲದೆ ಯಾರಾದರೂ ಭಜನೆ ಕಾರ್ಯಕ್ರಮ ಏರ್ಪಡಿಸಿದರೆ ಸಂತೋಷವಾಗಿ ಹಾಡುತ್ತೇವೆ. ನಮ್ಮ ಭಜನೆಯ ತಂಡಕ್ಕೆ 'ವಿವೇಕಾನಂದ ಭಜನ ಮಂಡಲಿ' ಎಂದು ಹೆಸರು. ಆಗಾಗ ನಮ್ಮ ಮನೆಯಲ್ಲೇ ಹಾಡುತ್ತೇವೆ. ಹಾಡು ನನ್ನ ಜೀವನದ ಶ್ರುತಿ. ಇದಕ್ಕೆ ಆಧಾರ ನಮ್ಮ ತಾಯಿ, ನಮ್ಮ ಸೋದರಮಾವ ಕೃಷ್ಣಭಾಗವತರು ಹಾಡುತ್ತಿದ್ದ ಭಕ್ತಿಗೀತೆಗಳೇ.

❒

## ಆತ್ಮಾವಲೋಕನ - ೨

# ನಾನೇಕೆ ವಿಜ್ಞಾನಿ ಆದೆ?

✍ ಪ್ರೊ. ಎನ್. ಕೃಷ್ಣಸ್ವಾಮಿ

ನನಗೆ ಮೊದಲಿನಿಂದ ವಿಜ್ಞಾನದಲ್ಲಿ ಅಂತಹ ಆಕರ್ಷಣೆ ಏನೂ ಇರಲಿಲ್ಲ. ಆದರೆ ವಿಜ್ಞಾನದ ಆವಿಷ್ಕಾರಗಳು ನನ್ನಲ್ಲಿ ವಿಸ್ಮಯ ಉಂಟುಮಾಡುತ್ತಿದ್ದುದು ನಿಜ.

ಆದರೆ ನನಗೆ ಇಂಟರ್ ಮೀಡಿಯೆಟ್ ಪರೀಕ್ಷೆಯಲ್ಲಿ ಬಂದ ಉತ್ತಮ ಅಂಕಗಳು ನನ್ನನ್ನು ವಿಜ್ಞಾನದ ತರಗತಿಗೆ ಸೇರಿಸಿತು. ಯಾರು ಯಾರಿಗೆ ಎಷ್ಟು ಅಂಕ ಬಂದಿದೆ ಎಂಬುದು ನನಗೆ ತಿಳಿಯದು. ನನ್ನ ಮಿತ್ರ ಬಿ.ಕೆ. ನರಸಿಂಹಮೂರ್ತಿ ನನ್ನ ಜೊತೆ ಕಾಲೇಜಿಗೆ ನಡೆದು ಹೋಗುತ್ತಿದ್ದವ. ಅವನು ನನಗೆ ಹೇಳಿದ — ನಿನಗೆ ಇಂಗ್ಲಿಷ್‌ನಲ್ಲಿ ಎಲ್ಲರಿಗಿಂತ ಹೆಚ್ಚು ನಂಬರು. ಲಿಟರೇಚರ್ ಆನರ್ಸ್‌ಗೆ ಸೇರಿದರೆ ನಿನಗೆ ಸಬ್ಜೆಕ್ಟ್ ಸ್ಕಾಲರ್‌ಶಿಪ್ ಸಿಗುತ್ತದೆ. ನನಗೆ ಫೀಸು ಕೊಡುವುದು — ಅದು 10, 11ರೂ. ಮಾತ್ರ ಆಗಿದ್ದರೂ ಬಹು ಕಷ್ಟವಾಗಿತ್ತು. ಸ್ಕಾಲರ್‌ಶಿಪ್ ಎಂದರೆ ತಿಂಗಳಿಗೆ ಹತ್ತೋ ಹನ್ನೆರಡೋ ರೂಪಾಯಿ ಬರುವುದು ಮತ್ತು ಫೀಸು ಮನ್ನಾ! ಇಂಗ್ಲಿಷ್ ಪ್ರೊಫೆಸರ್ ನಾಗೇಶರಾಯರನ್ನು ಕಂಡೆ. ಅವರು "ನೀನು ವಿಜ್ಞಾನದ (ಫಿಸಿಕ್ಸ್, ಕೆಮಿಸ್ಟ್ರಿ, ಮೇತಮೇಟಿಕ್ಸ್) ವಿದ್ಯಾರ್ಥಿ. ನೀನು ನಮ್ಮ ಆನರ್ಸ್ ತರಗತಿಗೆ ಬಂದರೆ ಬಹು ಸಂತೋಷವಾಗಿ ಸ್ವಾಗತಿಸುತ್ತೇನೆ" ಎಂದರು.

ನನ್ನ ಅಂಕಗಳಿಗೆ ಮೆಡಿಕಲ್, ಎಂಜಿನಿಯರಿಂಗ್ ಕಾಲೇಜುಗಳಿಗೆ ಸುಲಭವಾಗಿ ಪ್ರವೇಶ ಸಿಗುತ್ತಿತ್ತು. ಆದರೆ ತಿಂಗಳಿಗೆ 15 ಅಥವಾ 20 ರೂ. ಫೀಸ್ ಕೊಡಬೇಕಲ್ಲ! ಬೇಡ ಎಂದು ನಿಶ್ಚಯಿಸಿದೆ. ಮತ್ತೆ ನರಸಿಂಹಮೂರ್ತಿ ಹೇಳಿದ — ನಿನಗೆ ಕೆಮಿಸ್ಟ್ರಿಯಲ್ಲೂ ಅತಿ ಹೆಚ್ಚು ಅಂಕ ಬಂದಿದೆ. ಕೆಮಿಸ್ಟ್ರಿ ಆನರ್ಸ್‌ನಲ್ಲಿಯೂ ಸಬ್ಜೆಕ್ಟ್ ಸ್ಕಾಲರ್ ಶಿಪ್ ಸಿಗುತ್ತೆ. ಇನ್ನೊಂದು ಯೋಚನೆ ಇಲ್ಲದೆ ಕೆಮಿಸ್ಟ್ರಿ ಆನರ್ಸ್‌ಗೆ ಸೇರಿ ಒಂದು ವಾರ ಕ್ಲಾಸುಗಳಿಗೆ ಹಾಜರಿ ಆದೆ. ಇಂಟರ್‌ವ್ಯೂಗೆ ಹೋದಾಗ ನನ್ನ ಮುಖದ ಮೇಲೆ ಒಂದು ಕರಿಯ ಕಲೆ ಇತ್ತು. ಅದು ಹೇಗೆ ಆಯಿತು ಎಂದರೆ, ಕೆನ್ನೆ ಮೇಲೆ ಹುಳುಕಡ್ಡಿ ಆಯಿತು. ನಮ್ಮಣ್ಣ ಸ್ಪಿರಿಟ್ ಹಚ್ಚು ಎಂದ, ನಾನು ತಪ್ಪು ಮಾಡಿ ಅಸಿಟಿಕ್ ಆಸಿಡ್ ಹಚ್ಚಿದೆ. ಚರ್ಮ ಸುಟ್ಟಿತು, ಉರಿಯುತ್ತಿತ್ತು. ನೀರಿನಲ್ಲಿ ತೊಳೆದೆ. ಕೆಲವು ತಿಂಗಳು ಆ ಕಲೆ ಹಾಗೇ ಇದ್ದಿತು. ಪ್ರೊಫೆಸರ್ ಮಂಜುನಾಥ್ ಆ ಕಲೆ ಹೇಗೆ ಆಯಿತು ಎಂದರು, ವಿವರಿಸಿದೆ. ಅಸಿಟಿಕ್ ಆಸಿಡ್ ಫಾರ್ಮುಲಾ ಏನು ಎಂದು ಕೇಳಿದರು. ತಕ್ಷಣ ಹೇಳಿದೆ, $CH_3$ COOH. ನನ್ನನ್ನು ಆರಿಸಿದರು.

### ಫಿಸಿಕ್ಸ್ ಆನರ್ಸ್

ಮತ್ತೆ ನರಸಿಂಹಮೂರ್ತಿ ಹೇಳಿದ, ಮೊದಲು ನಂಬರು ಬಂದ ಸತೀಶ್ ಚಂದ್ರ, ಇನ್ನೊಬ್ಬ ಹುಡುಗ ಇವರಿಬ್ಬರಿಗೂ ಮೆರಿಟ್‌ಸ್ಕಾಲರ್‌ಶಿಪ್ ಬರುತ್ತದೆ. ಸಬ್ಜೆಕ್ಟ್ ಸ್ಕಾಲರ್‌ಶಿಪ್ ನಿನಗೆ ಬರುವುದು. ನನಗೆ ಕೆಮಿಸ್ಟ್ರಿಯಲ್ಲಿ ಸ್ವಲ್ಪವೂ ಆಸಕ್ತಿ ಇರಲಿಲ್ಲ. ಸಂತೋಷವಾಗಿ ಫಿಸಿಕ್ಸ್ ಆನರ್ಸ್ ಸೇರಿದೆ. ಹೀಗೆ ನಾನು ಫಿಸಿಕ್ಸ್ ಅಧ್ಯಯನ ಮಾಡಿದ್ದು!

ಮೂರು ವರ್ಷದ ನಂತರ 1948ರಲ್ಲಿ ಫಿಸಿಕ್ಸ್ ಆನರ್ಸ್ ಪಾಸ್ ಮಾಡಿದೆ. ಫಸ್ಟ್‌ಕ್ಲಾಸ್‌ಗೆ ಶೇ. 0.3 ನಂಬರು ಕಡಿಮೆ — 59.77 ಬಂದಿತ್ತು. ಇದನ್ನು ನೋಡಿ ನನ್ನನ್ನು ಇಂಟರ್‌ವ್ಯೂ ಮಾಡಿದ ವಿಕ್ರಮ ಸರಭಾಯಿ ನಿಮ್ಮದು ಎಂತಹ ಯೂನಿವರ್ಸಿಟಿ? ಬೇರೆ ಯಾವ ಸಂಸ್ಥೆಯಲ್ಲಿ ಆದರೂ ಆಗತ್ಯವಾದ 3/4 ನಂಬರುಗಳನ್ನು ಸೇರಿಸಿ ಶೇ. 60ರಷ್ಟು ಮಾಡಿ ಫಸ್ಟ್‌ಕ್ಲಾಸ್ ಕೊಡುತ್ತಿದ್ದರು ಎಂದರು.

ಇಂಟರ್‌ಮೀಡಿಯೆಟ್ ಕಾಲೇಜಿನಲ್ಲಿ ನನಗೆ ಇಷ್ಟವಾದ ಮೇಷ್ಟರು ತಿರುನಾರಾಯಣ ಅಯ್ಯಂಗಾರ್. ಅವರು ಸ್ಪಷ್ಟವಾದ ಕಲ್ಪನೆಗಳನ್ನು ಬಹು ಸ್ಪಷ್ಟವಾಗಿ ಬೋಧಿಸಿ ಫಿಸಿಕ್ಸ್ ಆಕರ್ಷಕವಾದ ವಿಷಯವನ್ನಾಗಿ ಮಾಡಿದರು. ಸೆಂಟ್ರಲ್ ಕಾಲೇಜಿನಲ್ಲಿ ಬಹು ಉತ್ಕೃಷ್ಟವಾದ ಅಧ್ಯಾಪಕರು ಆರ್. ಎಲ್. ನರಸಿಂಹಯ್ಯ. ಅವರ

ಇಷ್ಟವಾದ ವಿಷಯ ಎಲೆಕ್ಟ್ರಾನಿಕ್ಸ್-ಎಲೆಕ್ಟ್ರಿಸಿಟಿ. ವಿಷಯ ವನ್ನು ಒಂದು ಈಕ್ವೇಶನ್ ಅಥವಾ ಸಮೀಕರಣವನ್ನೇ ಆಗಿ ಪರಿವರ್ತಿಸಿ ಸಮೀಕರಣದ ಎಲ್ಲಾ ಭಾಗಗಳು ಹೇಗೆ ವರ್ತಿಸುತ್ತವೆ ಎಂದು ವಿವರಿಸಿ ಅದು ಹೇಗೆ ವ್ಯವಹಾರ ದಲ್ಲಿ ಉಪಯೋಗವಾಗುವುದು ಎಂದು ವಿವರಿಸುವುದು. ಎಂ.ಎಸ್.ಸಿ. ತರಗತಿಯಲ್ಲಿ ಮುಂದೆ ಇವರೇ ಎಲೆಕ್ಟ್ರಾನಿಕ್ಸ್ ಬೋಧಿಸಿ ನಮ್ಮ ತರಗತಿಯ ವಿದ್ಯಾರ್ಥಿಗಳ ಮನಸ್ಸನ್ನು ಸೆರೆಹಿಡಿದರು, ಆರೆಲ್ಲೆನ್. ಸುಬ್ಬರಾಮಯ್ಯ ನವರನ್ನು ಆಶ್ರಮದಲ್ಲಿ ನೋಡಿದ್ದೆ. ಇಲ್ಲಿ ಅವರು ಫಿಸಿಕ್ಸ್‌ನ ತತ್ತ್ವಗಳನ್ನು ಅದ್ವೈತ ವೇದಾಂತಕ್ಕೆ ಸಂಬಂಧಿಸುವ ಹಾಗೆ ಮಾಡಿದರು. ಕ್ಲಾಸಿನಲ್ಲಿ ಹೇಳುವುದಕ್ಕಿಂತ ಬಿಡುವಿನ ವೇಳೆ ಯಲ್ಲಿ ಫಿಸಿಕ್ಸ್ ವಿಷಯ ಮಾತನಾಡುವರು. ನನ್ನಂತಹ ಕೆಲವು ವಿದ್ಯಾರ್ಥಿಗಳಿಗೆ ಪ್ರಿಯರು. ಆದರೂ ಅನೇಕರು ಇವರಲ್ಲಿ ಅಷ್ಟೇನೂ ತಾದಾತ್ಮ್ಯ ಹೊಂದಿರಲಿಲ್ಲ. ಪ್ರೊಫೆಸರ್ ರಾಮಚಂದ್ರ ರಾವ್ ಮತ್ತು ಪ್ರೊಫೆಸರ್ ಬೊಂಡಾಡೆಯವರು ವಿದ್ಯಾರ್ಥಿಗಳಿಂದ ದೂರವಾಗಿಯೇ ಇದ್ದರು. ಅಂತು ಆನರ್ಸ್‌ನ ಮೂರು ವರ್ಷಗಳು ಮತ್ತು ಎಂ.ಎಸ್.ಸಿ.ಯ ಎರಡು ವರ್ಷಗಳು — ನನಗೆ ಉಪಾಧ್ಯಾಯನಾಗಿ ಪಾರ್ಟ್‌ಟೈಂ ಓದುತ್ತಿದ್ದೆನಾದುದ ರಿಂದ ನನಗೆ ಎರಡು ವರ್ಷ, ಉಳಿದವರಿಗೆ ಒಂದೇ ವರ್ಷದ ಕೋರ್ಸ್.

ವಿಷಯ ಬಹು ಆಕರ್ಷಕವಾದರೂ ನನಗೆ ಇದರ ಮೇಲೆ ಯಾವ ವ್ಯಾಮೋಹವೂ ಉಂಟಾಗಲಿಲ್ಲ. ಇದು ನನಗೆ ಉದ್ಯೋಗಕ್ಕೆ ಮಾರ್ಗ — ಹೊಟ್ಟೆಪಾಡಿನ ಸಾಧನ ಅಷ್ಟೆ.

## ಮೊದಲ ಉದ್ಯೋಗ

ಆನರ್ಸ್ ಪಾಸುಮಾಡಿದೆ. ಮುಂದೆ ಏನು? ವಿಜಯ ಕಾಲೇಜಿನಿಂದ ಕರೆ ಬಂದಿತು. ಅವರೇ ಕರೆದು ಉಪಾಧ್ಯಾಯನ ಕೆಲಸ ಕೊಟ್ಟರು. ಪ್ರಿನ್ಸಿಪಾಲರಾದ ರಾವ್ ಬಹದ್ದೂರ್ ವೆಂಕಟೇಶಾಚಾರ್ ಅವರು ಪ್ರಸಿದ್ಧ ದ್ವೈತ ವೇದಾಂತ ಪಂಡಿತರೂ ಆಗಿದ್ದ, ಟಾಟಾ ಇನ್ಸ್‌ಟಿಟ್ಯೂಟಿನ ಡೈರೆಕ್ಟರ್ ಆಗಿದ್ದು ರಿಟೈರ್ಡ್ ಆಗಿದ್ದ ಪ್ರೊಫೆಸರ್. ನನಗೆ ಒಂದು ಲೆಕ್ಚರ್ ಕ್ಲಾಸ್ ಕೊಟ್ಟು ತಾವು ಹಿಂದಿನ ಬೆಂಚಿನಲ್ಲಿ ಕುಳಿತು ನನ್ನ ಉಪನ್ಯಾಸ ಕೇಳಿ, ಒಪ್ಪಿ ಅಲ್ಲಿಯೇ ಕೆಲಸಕ್ಕೆ ಹಾಜರಾಗುವ ಹಾಗೆ ಆಜ್ಞೆ ಹೊರಡಿಸಿದರು.

ಒಂಭತ್ತು ವರ್ಷ ಉಪನ್ಯಾಸಕನಾಗಿ ವಿದ್ಯಾರ್ಥಿಗಳಿಗೆ ಎಷ್ಟು ಕಲಿಸಿದೆನೋ ನಾನೂ ಅಷ್ಟನ್ನು ಕಲಿತೆ. ಆದರೆ ಮುಖ್ಯವಾಗಿ ಇದರಿಂದ ತಿಂಗಳಿಗೆ 115 ರೂ. ವರಮಾನ ಬಂದಿತು. ನಮ್ಮ ಮನೆಯ ಬಡತನ ಹರಿಯಿತು. ತಂದೆ ಯವರ ಸಂಪಾದನೆ ನಮ್ಮ ದೊಡ್ಡ ಕುಟುಂಬಕ್ಕೆ ಸಾಕಾಗು ತ್ತಿರಲಿಲ್ಲ. ಅರೆಹೊಟ್ಟೆಯ ಊಟವನ್ನೇ ಮಾಡುತ್ತಿದ್ದೆವು. ನಮ್ಮಣ್ಣ ಶಿವು ಮೊದಲು ಬರೋಡಾ ಕಾಲೇಜಿನಲ್ಲಿ, ಆಮೇಲೆ ಮದರಾಸು AIRನಲ್ಲಿ ಕೆಲಸ ಮಾಡಲು ಆರಂಭಿಸಿದ ಮೇಲೆ ತಿಂಗಳಿಗೆ ಇಪ್ಪತ್ತೋ ಇಪ್ಪತ್ತೈದೋ ಅಮ್ಮನಿಗೆ ಕಳುಹಿಸಿ ಬಡತನದ ಭಾರವನ್ನು ಕಡಿಮೆ ಮಾಡಿದ್ದ. ಆದರೆ ಬಡತನದಿಂದ ಬಿಡುಗಡೆ ಆದದ್ದು ನನಗೆ ಉದ್ಯೋಗ ದೊರೆತ ಮೇಲೆಯೇ — ಏಕೆಂದರೆ ನಾನು ಬೆಂಗಳೂರಿನಲ್ಲೇ ಕೆಲಸ ಮಾಡುತ್ತಿದ್ದೆ. ನನ್ನ ಸಂಬಳ ಎಲ್ಲಾ ಮನೆ ಖರ್ಚಿಗೆ, ಹೊಸದಾಗಿ ಬಾಡಿಗೆಗೆ ತೆಗೆದುಕೊಂಡ ಮನೆ ಬಾಡಿಗೆಗೆ ದಕ್ಕುತ್ತಲಿತ್ತು. ಜೀವನ ದಲ್ಲಿ ನಾವು ಸರಾಗವಾಗಿ ಉಸಿರಾಡುವ ಹಾಗೆ ಆಯಿತು. ಹೀಗೆ ನನ್ನ ಅಧ್ಯಯನದಿಂದ ಸ್ವಲ್ಪ ಜ್ಞಾನಾರ್ಜನೆ ಏನೋ ಆಯಿತು. ಆದರೆ ಅದರ ಮುಖ್ಯ ಪ್ರತಿಫಲ ನಮ್ಮ ಹೊಟ್ಟೆಪಾಡು ಸರಾಗವಾಗಿ ನಡೆಯುತ್ತಿತ್ತು. ಹಾಗೆ ಆಗಿದ್ದು 1948 ರಿಂದ 1950 ರವರೆಗೆ. ವಿಜಯ ಕಾಲೇಜಿನಲ್ಲಿ ಪಾಠ ಮಾಡುತ್ತಲೇ ಸೆಂಟ್ರಲ್ ಕಾಲೇಜಿನಲ್ಲಿ ಎಂ.ಎಸ್.ಸಿ.ಗಾಗಿ ಓದಿದೆ. ಬೆಳಗಿನಿಂದ ಸಂಜೆಯವರೆಗೆ ಪಾಠ ಹೇಳುವುದು, ಪಾಠ ಕೇಳುವುದು ಇದೇ ಕೆಲಸ. ವರ್ಷಕ್ಕೆ ಹತ್ತು ರೂಪಾಯಿ ಬಡ್ತಿಯಾಗಿ ಸಿಗುತ್ತಿತ್ತು. 1957ರ ವೇಳೆಗೆ 160 + 15 ರೂ.ಗಳು ಬರುತ್ತಿತ್ತು. ಆ ವೇಳೆಗೆ ನಾನೊಬ್ಬ ಒಳ್ಳೆ ಶಿಕ್ಷಕ ಎಂದು ಹೆಸರು ಬಂದಿತ್ತು.

ಒಂಬತ್ತು ವರ್ಷ ಫಿಸಿಕ್ಸ್ ಪಾಠ ಹೇಳಿ ನನ್ನ ವಿಜ್ಞಾನದ ವಿಷಯವನ್ನು ಅರ್ಥಮಾಡಿಕೊಂಡು ಅದರ ಮಹತ್ತ್ವ ವನ್ನು ಅರ್ಥ ಮಾಡಿಕೊಳ್ಳುವಂತೆ ಆಯಿತು. ವರ್ಷ ವರ್ಷವೂ ಅದೇ ಪಾಠವನ್ನು ಹೇಳುವುದು ಬೇಜಾರಾಗ ತೊಡಗಿತು. ಇಷ್ಟಕ್ಕೂ ಇದೆಲ್ಲ ಹೊಟ್ಟೇಪಾಡಿಗಾಗಿ, ನನ್ನ ನಿಜವಾದ 'ಕೆಲಸ' ಆಶ್ರಮದಲ್ಲಿ ಅಲ್ಲಿನ ಉಪನ್ಯಾಸಗಳು,

ಮಕ್ಕಳ ತರಗತಿಗಳು (ಪರೀಕ್ಷೆಗೆ ತಯಾರು ಮಾಡುವ ಕಾರ್ಯಕ್ರಮಗಳು), ಸಂಜೆಯ ಪ್ರಾರ್ಥನೆ, ಸಾಧುಗಳ ಸಂಗತಿ, ಉಪನ್ಯಾಸಗಳು ಇವು ನನಗೆ ಪ್ರಿಯತರವಾದವು. ಆಶ್ರಮದ ಹತ್ತಿರವೇ ಮನೆ ಇದ್ದು ಹೋಗಿ ಬರುವುದು ಅತಿ ಸುಲಭ ಆಗಿತ್ತು. ಆದರೆ ವಿಜಯ ಕಾಲೇಜಿನ ಕೆಲಸ ಸ್ವಲ್ಪ ಬೇಜಾರಾಯಿತು. ಆಗ ಒಬ್ಬ ವಿದ್ಯಾರ್ಥಿಯ ಮೂಲಕ ಒಂದು ಸಂದೇಶ ಬಂದಿತು.

### ಹುಚ್ಚಾಸ್ಪತ್ರೆಯಲ್ಲಿ

ಡಾಕ್ಟರ್ ಗೋವಿಂದಸ್ವಾಮಿಯವರು ಅಂತರರಾಷ್ಟ್ರಿಯ ಖ್ಯಾತಿ ಗಳಿಸಿದ ಮನೋರೋಗ ಚಿಕಿತ್ಸೆಯ ಪರಿಣತರು. ಅವರು ಹೇಳಿ ಕಳುಹಿಸಿದ್ದರು — "ನಿನಗೆ ಸಂಶೋಧನೆಯ ಕೆಲಸ ಮಾಡುವುದಕ್ಕೆ ಇಷ್ಟವಿದ್ದರೆ ನಮ್ಮ ಹೊಸ ಸಂಸ್ಥೆಗೆ ಬಾ!" ಎಂದು. ಅದು ಆಲ್ ಇಂಡಿಯ ಇನ್ಸ್‌ಟಿಟ್ಯೂಟ್ ಆಫ್ ಮೆಂಟಲ್ ಹೆಲ್ತ್; ಮನೋವಿಜ್ಞಾನ ಸಂಶೋಧನೆ, ಚಿಕಿತ್ಸೆಯ ಸಂಸ್ಥೆ. ಡಾಕ್ಟರನ್ನು ನೋಡಿದೆ. ಅವರಿಗೆ ನನ್ನ ಮೇಲೆ ವಿಶ್ವಾಸ ಬಂದಿತು. ಒಂದು ಇಂಟರ್‌ವ್ಯೂಗೆ ಕರೆದರು. ಹೋದರೆ ಅಲ್ಲಿ ಅಧ್ಯಕ್ಷರಾದ ಡಾಕ್ಟರ್ ಗೋವಿಂದಸ್ವಾಮಿಯವರ ಜೊತೆಗೆ ನಮ್ಮ ಮೇಷ್ಟರು ಆರ್. ಎಲ್. ನರಸಿಂಹಯ್ಯ, ನನಗೆ ಪರಿಚಿತರಾಗಿದ್ದ ಡಾ|| ಸಿ. ವಿ. ನಟರಾಜನ್ ಇದ್ದರು. ಇದ್ದ ನಾಲ್ಕು ಅಭ್ಯರ್ಥಿಗಳ ಪೈಕಿ ನನ್ನನ್ನು ಆರಿಸಿದರು.

ಅಲ್ಲಿ ನನ್ನ ಮಾರ್ಗದರ್ಶಕರು ಆರ್.ಎಲ್.ಎನ್. ಸೆಂಟ್ರಲ್ ಕಾಲೇಜಿನಲ್ಲಿ ನಮ್ಮ ಮೇಷ್ಟರು, ಉತ್ತಮ ಫಿಸಿಕ್ಸ್ ವಿದ್ವಾಂಸರು, ಅದರಲ್ಲೂ ಪ್ರಯೋಗ ಪ್ರಿಯರು. ಈ ಹೊಸ ಸಂಸ್ಥೆಯಲ್ಲಿ ಅವರದು ಒಂದು ಮುಖ್ಯ ಪಾತ್ರ ಏನೆಂದರೆ ಅಲ್ಲಿದ್ದ ಎಲೆಕ್ಟ್ರೋ ಎನ್ಸೆಫೆಲೋಗ್ರಾಫ್ — ಇಇಜಿ ಯಂತ್ರವನ್ನು ಉಪಯೋಗಿಸಿ ಮೆದುಳಿನಲ್ಲಿನ ವಿದ್ಯುತ್ ಅಲೆಗಳ ಅಧ್ಯಯನ. ನನ್ನನ್ನು ಐಸಿಎಂಆರ್, ಎಂದರೆ ಇಂಡಿಯನ್ ಕೌನ್ಸಿಲ್ ಆಫ್ ಮೆಡಿಕಲ್ ರಿಸರ್ಚ್ ಎಂಬ ಭಾರತ ಸರ್ಕಾರದ ಸಂಶೋಧನಾ ಕೇಂದ್ರದ ವಿಜ್ಞಾನಿಯಾಗಿ ನಿಯುಕ್ತಿ ಮಾಡಿದ್ದರು. ಅಲ್ಲಿ ಕೆಲಸ ಮಾಡುತ್ತಿದ್ದ ಇನ್ನೊಬ್ಬರು ಹೆಚ್. ವಿ. ಗುಂಡೂ ರಾವ್. ಇವರೂ ನನ್ನ ಜೊತೆ ಸೆಂಟ್ರಲ್ ಕಾಲೇಜಿನಲ್ಲಿ ಓದಿದವರೇ. ಅವರಿಗೆ ನಾನೊಬ್ಬ ಸಂಗಾತಿ ಆದೆ. ನಮ್ಮಿಬ್ಬರಿಗೂ ಮಾರ್ಗದರ್ಶಿ ಆರ್.ಎಲ್.ಎನ್. ಇಲ್ಲಿ ವಿಜ್ಞಾನದ ಹೊಸ ಪ್ರಪಂಚದಲ್ಲಿ ಕಾಲಿಟ್ಟೆ. ಇಇಜಿ ಯಂತ್ರದ ಅದ್ಭುತ ಶಕ್ತಿಯನ್ನು ಕಂಡು ಬೆರಗಾದೆ. ಆ ಯಂತ್ರದ ಕಾರ್ಯಾಚರಣೆ ಕುತೂಹಲಕಾರಿಯಾಯ್ತು. ಮಿದುಳಿನ ಕಾರ್ಯದ ಅದ್ಭುತವಾದ ರಹಸ್ಯಗಳನ್ನು ಅರ್ಥಮಾಡಿಕೊಳ್ಳುವ ಯತ್ನಗಳ ಅಧ್ಯಯನ ಮಾಡಲು ಅವಕಾಶವಾಯಿತು. ಇತರ ಆಸ್ಪತ್ರೆಯ ಉಪಕರಣಗಳ ಸಂಬಂಧವೂ ಬಂದಿತು. ಇವುಗಳಲ್ಲಿ ಮುಖ್ಯವಾದದ್ದು ಇಸಿಜಿ ಯಂತ್ರ — ಎಲೆಕ್ಟ್ರೊ ಕನ್ವಲ್ಷನ್ ಥೆರಪಿ — ಎಂದರೆ ಎಲೆಕ್ಟ್ರಿಕ್ ಶಾಕ್ ಕೊಟ್ಟು ಚಿಕಿತ್ಸೆ ಮಾಡುವುದು! ಇದಕ್ಕಾಗಿ ಹಲವು ವಿದೇಶೀ ಯಂತ್ರಗಳ ಉಪಯೋಗ ನಡೆದಿತ್ತು. ಯಂತ್ರ ಕೆಟ್ಟರೆ ಅದು ಇಇಜಿ ಡಿಪಾರ್ಟ್‌ಮೆಂಟಿಗೆ ಬರುವುದು. ಗುಂಡೂರಾವ್ ಮತ್ತು ನಾನು ಅವುಗಳ ರಿಪೇರಿ ಮಾಡಬೇಕು. ಗುಂಡೂರಾವ್‌ಗೆ ಒಂದು ವಿಚಾರ ಹೊಳೆಯಿತು. ನಾವೇ ಏಕೆ ಒಂದು ಹೊಸ ಯಂತ್ರ ತಯಾರಿಸಬಾರದು? ನನಗೆ ಹೇಳಿದರು. ನಾವಿಬ್ಬರೂ ಡಾಕ್ಟರ್ ಗೋವಿಂದಸ್ವಾಮಿಯವರಿಗೆ ಹೇಳಿದೆವು. ಅವರು ಆಗತ್ಯವಾದ ಹಣವನ್ನು ಮಂಜೂರು ಮಾಡಿದರು. ನಾವಿಬ್ಬರೂ ಊರೆಲ್ಲ ಸುತ್ತಿ ಅಗತ್ಯವಾದ ಟ್ರಾನ್ಸ್‌ಫಾರ್ಮರ್ ಮೊದಲಾದ ವಸ್ತುಗಳನ್ನು ತಂದು ಜೋಡಿಸಿದೆವು. ಯಂತ್ರ ಚೆನ್ನಾಗಿ ಕೆಲಸ ಮಾಡಿತು. ಒಬ್ಬ ಮನೋರೋಗಿಯ ಮೇಲೆ ಪ್ರಯೋಗಿಸಿದೆವು. ಚೆನ್ನಾಗಿ ಫಲಿತಾಂಶ ಬಂತು. ಯಂತ್ರಕ್ಕೆ ಆದ ಖರ್ಚು ಸುಮಾರು 250ರೂ. ಅಷ್ಟೆ. ಆಮದು ಮಾಡಿದ ವಿದೇಶೀ ಯಂತ್ರಗಳಿಗೆ ಸಾವಿರಾರು ರೂಪಾಯಿಗಳಾಗುತ್ತಿತ್ತು. ಡಾಕ್ಟರಿಗೆ ಬಹು ಸಂತೋಷವಾಯಿತು. ವಿದೇಶೀ ಯಂತ್ರಗಳ ರಿಪೇರಿಯ ತಲೆನೋವು ಹೋಯಿತು. ನಮ್ಮ ಯಂತ್ರವೇ ಬಳಕೆಗೆ ಬಂದಿತು. ಆದರೆ ಇದು ನಮ್ಮ ಸಂಶೋಧನೆಯ ವಿಷಯ ಅಲ್ಲವೇ ಅಲ್ಲ! ಅದರ ಕೆಲಸ ಮಂದಗತಿಯಲ್ಲಿ ನಡೆಯಿತು. ಈ ಮಧ್ಯೆ ಒಬ್ಬ ಅಮೆರಿಕನ್ ಮನೋವಿಜ್ಞಾನಿ ಇಂದ್ರಿಯಗಳು ಹೇಗೆ ಪ್ರಪಂಚವನ್ನು ನೋಡಿ ಜ್ಞಾನ ಪಡೆಯುತ್ತವೆ, ಅದಕ್ಕೆ ಪರಿಸರ ಎಷ್ಟು ಉಪಯೋಗಕರ ಎಂದು ತೋರಿಸಲು ಒಂದು ಪ್ರಯೋಗವನ್ನು ಮಾಡಿತೋರಿಸಿದ. ಅದನ್ನು ನೋಡಿದೆವು, ಗುಂಡೂರಾವ್‌ಗೆ ಹೊಳೆಯಿತು. ಇದೇನು ಸುಲಭದ

ಕೆಲಸ. ನಾವು ಈ ಯಂತ್ರ ತಯಾರಿಸಬಹುದು ಎಂದರು. ನಾನು ಮಾಡೋಣ ಎಂದೆ. ತಯಾರುಮಾಡಿ ಡೈರೆಕ್ಟರ್‌ಗೆ ತೋರಿಸಿದೆವು. ಅವರಿಗೆ ವಿಸ್ಮಯವಾಯಿತು. ಅದರ ಸಾಹಿತ್ಯ ಅಧ್ಯಯನ ಮಾಡಿ ಇನ್ನೂ ಕೆಲವು ಸಾಧನಗಳನ್ನು ತಯಾರಿಸಿದೆವು — ಎಲ್ಲರ ಮೆಚ್ಚುಗೆ ಸಂಪಾದಿಸಿದೆವು. ಆ ಹೊತ್ತಿಗೆ ಸಂಸ್ಥೆ ತನ್ನದೇ ಆದ ಒಂದು ಪತ್ರಿಕೆ ಆರಂಭಿಸಿತು. ನಮ್ಮ ಸಂಶೋಧನೆಗಳ ಮೇಲೆ ಲೇಖನಗಳನ್ನು ಅಲ್ಲಿ ಪ್ರಕಟಿಸಿದೆವು. ಲೇಖಕರು ಡಾಕ್ಟರ್ ಗೋವಿಂದಸ್ವಾಮಿ, ಹೆಚ್. ವಿ. ಗುಂಡೂರಾವ್ ಮತ್ತು ಎನ್. ಕೃಷ್ಣಸ್ವಾಮಿ.

ಈ ಕೆಲಸ ಎಲ್ಲ ನಡೆಯುತ್ತಿದ್ದಾಗಲೇ ಡಾಕ್ಟರ್ ಗೋವಿಂದಸ್ವಾಮಿ ನಿವೃತ್ತರಾದರು. ಗುಂಡೂರಾವ್ ಹೆಚ್ಚಿನ ಅಧ್ಯಯನಕ್ಕಾಗಿ ಇಂಗ್ಲೆಂಡಿಗೆ ಹೋದರು. ನನಗೂ ಎಲ್.ಆರ್.ಡಿ.ಇ. ಎಂಬ ಭಾರತ ಸರ್ಕಾರದ ಎಲೆಕ್ಟ್ರಾನಿಕ್ಸ್ ಸಂಸ್ಥೆಯಿಂದ ಉದ್ಯೋಗದ ಆಹ್ವಾನ ಬಂದಿತು. ಈ ಕೆಲಸ ಬಿಟ್ಟು ಅಲ್ಲಿಗೆ ಹೋದೆ. ಸಂಬಳ ಇಲ್ಲಿನ ಎರಡರಷ್ಟು ಬಂದಿತು. ದೊಡ್ಡ ಸಂಸ್ಥೆಯ ಕೆಲಸ. ಹುಚ್ಚಾಸ್ಪತ್ರೆಯ ಕೆಲಸ ನನಗೆ ವಿಜ್ಞಾನದಲ್ಲಿ ತೊಡಗಿಸಿ ಕೊಳ್ಳುವುದು ಹೇಗೆ ಎಂದು ತರಬೇತಿ ಕೊಟ್ಟಿತು. ಇದಕ್ಕೆ ಗುಂಡೂರಾವ್ ಅವರೇ ನನಗೆ ಸಹಾಯಕರು. ಡಾಕ್ಟರ್ ಗೋವಿಂದಸ್ವಾಮಿಯವರ ಉತ್ತೇಜನ ಸಂಪೂರ್ಣ ವಾಗಿತ್ತು. ಇಲ್ಲಿ ಎರಡೂವರೆ ವರ್ಷ ಕೆಲಸ ಮಾಡಿದ ಮೇಲೆ ಮತ್ತೆ ಕೆಲಸ ಬದಲಾಯಿಸಿದೆ. 1960ರ ಜನವರಿ ಒಂದರಂದು ಎಲ್.ಆರ್.ಡಿ.ಇ.ಗೆ ಸೇರಿದೆ.

**ರಕ್ಷಣಾ ಇಲಾಖೆಯಲ್ಲಿ**

ಬೆಂಗಳೂರಿನಲ್ಲಿ ರಕ್ಷಣಾ ಇಲಾಖೆಯ ಹಲವು ಪ್ರಯೋಗಶಾಲೆಗಳು ಇವೆ ಎಂಬುದು ನನಗೆ ಗೊತ್ತೇ ಇರಲಿಲ್ಲ. ಒಂದು ದಿನ ಕರ್ನಲ್ ರಾವ್ ಎಂಬುವವರು ನಮ್ಮ ಆಸ್ಪತ್ರೆಗೆ ಒಬ್ಬ ರೋಗಿಯನ್ನು ಕರೆತಂದರು. ಇಇಜಿ ತೆಗೆದುಕೊಂಡೆವು. ಆಗ ಕರ್ನಲ್ ರಾವ್ ನಮ್ಮ ಸಣ್ಣ ಪ್ರಯೋಗಶಾಲೆಯನ್ನು ನೋಡಿ ವಿಸ್ಮಿತರಾದರು. ನಿಮಗೆ ಇಷ್ಟವಿದ್ದರೆ ಬಂದು ನಮ್ಮ ಎಲ್.ಆರ್.ಡಿ.ಇ. ಸೇರಿ ಎಂದರು. ನಾನು ಅದರ ಹೆಸರೇ ಕೇಳಿರಲಿಲ್ಲ. ಒಂದು ದಿನ ಹೋಗಿ ಅಲ್ಲಿನ ಡೈರೆಕ್ಟರ್ ಕರ್ನಲ್ ಚಕ್ರವರ್ತಿ ಅವರನ್ನು ಕಂಡೆ. ಇಲ್ಲಿ ಅಸಿಸ್ಟೆಂಟ್ ಫೋರ್‌ಮನ್ ಕೆಲಸಗಳು ಖಾಲಿ ಇವೆ. ಸಂಬಳ 300 ರೂ. ಮತ್ತು ತುಟ್ಟಿ ಭತ್ಯೆ ಎಂದರು. ಇದಕ್ಕಾಗಿ ಎಂಪ್ಲಾಯ್‌ಮೆಂಟ್ ಎಕ್ಸ್‌ಛೇಂಜ್‌ನಲ್ಲಿ ಹೆಸರು ಕೊಡು ಎಂದರು. ಅಲ್ಲಿ ನನ್ನ ಹೆಸರು ನೊಂದಾಯಿಸಿದೆ. ಎಲ್.ಆರ್.ಡಿ.ಇ.ಯಿಂದ ಇಂಟರ್‌ವ್ಯೂ ಕರೆಬಂದಿತು. ಅದರ ಜೊತೆಗೆ ಸಿ.ಐ.ಎಲ್. ಎಂಬ ಇನ್ನೊಂದು ರಕ್ಷಣಾ ಇಲಾಖೆಯ ಪ್ರಯೋಗ ಶಾಲೆಯಿಂದಲೂ ಕರೆ ಬಂತು. ಎರಡೂ ಕಡೆ ನನ್ನನ್ನು ಆರಿಸಿಕೊಂಡಿದ್ದರು. ಸಂಬಳ ನನ್ನ ಹಳೆ ಸಂಬಳದ ಸುಮಾರು ಎರಡರಷ್ಟು. ಆದರೆ ಕಷ್ಟಕರವಾದ ಕೆಲಸ. ಬೆಳಗ್ಗೆ 8 ರಿಂದ ಮಧ್ಯಾಹ್ನ 4ರವರೆಗೆ ಅಲ್ಲಿಯೇ ಇರಬೇಕು. ನಡುವೆ ಊಟಕ್ಕೆ ಅರ್ಧ ಘಂಟೆ ಬಿಡುವು. ಯಾವಾಗಲೂ ಪಾಸ್ ಇಟ್ಟುಕೊಂಡಿರಬೇಕು. ಹೊಸ ಶಿಸ್ತು. ಕೆಲಸ ಏನೂ ಅಷ್ಟು ಕಷ್ಟ ಅಲ್ಲ. ಹೊಸ ನಿಯಮಾವಳಿಗಳು, ಹೊಸ ವಾತಾವರಣ ಎಲ್ಲಕ್ಕೂ ಹೊಂದಿಕೊಂಡೆ. ಆಶ್ಚರ್ಯ, ಹದಿನೆಂಟು ತಿಂಗಳಿಗೇ ನನಗೆ ಒಂದು ಬಡ್ತಿ ಬಂದಿತು. ಫೋರ್‌ಮನ್ ಎಂಬ ಕೆಲಸ. ಸಂಬಳ 400 ರೂಪಾಯಿ. ಆ ಕೆಲಸದಲ್ಲಿರು ವಾಗಲೇ ದೆಹಲಿಯ ಯು.ಪಿ.ಎಸ್.ಸಿ. ಭಾರತ ಸರ್ಕಾರದ ಕೆಲಸ ನೇಮಕ ಸಂಸ್ಥೆಯ ಜಾಹಿರಾತು ನೋಡಿ ಅರ್ಜಿ ಹಾಕಿದೆ. ಅಲ್ಲಿ ಡಿಫೆನ್ಸ್ ಇನ್ಸ್‌ಟಿಟ್ಯೂಟ್ ಆಫ್ ಫಿಸಿಯಾಲಜಿ ಅಂಡ್ ಅಲೈಡ್ ಸೈನ್ಸಸ್ ಎಂಬ ಸಂಸ್ಥೆ ಯಲ್ಲಿ ಕೆಲಸ ಮಾಡಬೇಕು ಎಂದು ಆರಿಸಲ್ಪಟ್ಟೆ. ದೆಹಲಿಗೆ ಬರುತ್ತೇನೆ ಎಂದು ಪತ್ರ ಬರೆದೆ. ಆಶ್ಚರ್ಯ! ತಕ್ಷಣ ದೆಹಲಿಗೆ ಬೇಡ. ನಿಮ್ಮ ಸಂಸ್ಥೆ ಮದರಾಸಿಗೆ ಹೋಗುತ್ತದೆ. ಮದರಾಸಿಗೆ ಹೋಗಿ ಕೆಲಸಕ್ಕೆ ಸೇರಿಕೋ ಎಂದು ಟೆಲಿಗ್ರಾಂ, ಪತ್ರಗಳು ಬಂದವು. ನನಗೆ ಇನ್ನೂ ಅನುಕೂಲ ವಾಯಿತು. ದೆಹಲಿ ದೂರ. ಮದ್ರಾಸು ಹತ್ತಿರವೇ ಇದೆ. 3/4 ವಾರಗಳಿಗೆ ಒಂದು ಸಲ ಮನೆಗೆ ಬಂದು, ಆಶ್ರಮಕ್ಕೆ ಹೋಗಿಬರುತ್ತಿದ್ದೆ.

ಮದರಾಸಿನಲ್ಲಿ ನಾನೊಬ್ಬನೇ ಎಲೆಕ್ಟ್ರಾನಿಕ್ಸ್ ತಿಳಿದವನು. ಈಗ ನಾನು ಸೀನಿಯರ್ ಸೈಂಟಿಫಿಕ್ ಆಫೀಸರ್. ನನ್ನ ಹತ್ತಿರ 5/6 ಜನ ಸಹಾಯಕರು ಇದ್ದರು. ಅಲ್ಲಿ ಯಂತ್ರೋಪಕರಣಗಳನ್ನು ನೋಡಿಕೊಳ್ಳುವುದು ನಮ್ಮ ಕೆಲಸ. ಇತರ ಇಲಾಖೆಗಳಲ್ಲಿ ಡಾಕ್ಟರುಗಳು ಫಿಸಿಯಾಲಜಿ — ಶರೀರ ಶಾಸ್ತ್ರಜ್ಞರು ಇದ್ದರು. ಇವರಿಗೆ ಸಹಾಯ ಮಾಡುವುದು ನನ್ನ ಕೆಲಸ. ಇವರೆಲ್ಲ ನನಗೆ ಒಳ್ಳೆ ಸ್ನೇಹಿತ

ರಾದರು. ಡೈರೆಕ್ಟರ್ ಮೊದಲು ಜನರಲ್ ಬಿ.ಎಂ. ರಾವ್ ಇದ್ದರು. ಆಮೇಲೆ ಸರ್ಜನ್ ಕಮಾಂಡರ್ ಮಲ್ಹೋತ್ರಾ. ಕೆಲಸ ಬೆಳಗ್ಗೆ 9 ರಿಂದ ಸಂಜೆ 5 ರವರೆಗೆ. ಆದರೆ ಪಾಸು, ಸೆಕ್ಯೂರಿಟಿ ಇವುಗಳ ಹಾವಳಿ ಇಲ್ಲ. ಹೆಚ್ಚು ಸ್ವಾತಂತ್ರ್ಯ. ಇಲ್ಲಿ ನಾನು ಐದು ವರ್ಷ ಇದ್ದೆ. ಮದರಾಸು ಮಠದ ಹತ್ತಿರವೇ ಉಡುಪಿ ಹೋಟಲಿನಲ್ಲಿ ರೂಂ ಬಾಡಿಗೆಗೆ ಹಿಡಿದೆ. ಅಲ್ಲಿಯೇ ಊಟ. ಬೆಳಗ್ಗೆ 8½ಗೆ ಊಟ ಮಾಡಿಕೊಂಡು ಆಫೀಸಿಗೆ ಹೊರಡುತ್ತಿದ್ದೆ. ಸೆಂಟ್ರಲ್ ರೈಲ್ವೇ ಸ್ಟೇಷನ್ನಿನ ಎದುರಿಗೆ ಇರುವ ಮದ್ರಾಸ್ ಮೆಡಿಕಲ್ ಕಾಲೇಜಿನಲ್ಲಿಯೇ ನಮ್ಮ ಪ್ರಯೋಗಶಾಲೆ. ವಿವಿಧ ಪರಿಸರಗಳಲ್ಲಿ ಮಾನವನ ಶರೀರ ಹೇಗೆ ವರ್ತಿಸುವುದು ಎಂಬುದೇ ಇಲ್ಲಿನ ಅಧ್ಯಯನದ ವಿಚಾರ — ಸಮುದ್ರದಲ್ಲಿ, ಹಿಮಾಲಯದಲ್ಲಿ, ಮರುಭೂಮಿಯಲ್ಲಿ ಕಾರ್ಯಾಚರಣೆ ಮಾಡಬೇಕಾಗಿದ್ದಿತು. ನಾನು ಹೆಚ್ಚಾಗಿ ಮದರಾಸಿನಲ್ಲಿಯೇ ಇದ್ದೆ. ಎರಡು ಮೂರು ಸಲ ಸಮುದ್ರಯಾನ ಮಾಡಬೇಕಾಯಿತು. ಅದೊಂದು ಒಳ್ಳೆ ಅನುಭವ.

ಇಲ್ಲಿ ಇತರ ವಿಜ್ಞಾನಿಗಳೊಡನೆ ಹಲವು ಯಂತ್ರಗಳನ್ನು ಕುರಿತು ಸಂಶೋಧನೆ ನಡೆಸಿದೆ. ಕೆಲವು ಯಂತ್ರಗಳ ರಿಪೇರಿ ಕೆಲಸ ಮಾಡಿದೆ. ಡೈರೆಕ್ಟರ್ ಜರ್ಮನಿಯಿಂದ ತಂದಿದ್ದ ಟ್ರಾನ್ಸಿಸ್ಟರ್ ರೇಡಿಯೋ ಕೆಟ್ಟುಹೋಯಿತು. ಬೇರೆ ಯಾರಿಗೂ ಸರಿಮಾಡಲಾಗಲಿಲ್ಲ. ನಾನು ಮಾಡಿದೆ. ಅವರಿಗೆ ಬಹಳ ಸಂತೋಷವಾಯಿತು ಈ ಕೆಲಸಗಳಲ್ಲೆಲ್ಲಾ ನನಗೆ ಒಬ್ಬ ಪ್ರತಿಭಾಶಾಲಿ ಆಂಧ್ರದ ಯುವಕ ವೆಂಕಟರಾಜು ಎನ್ನುವವನು ಬಹಳ ಒತ್ತಾಸೆ ಮಾಡುತ್ತಿದ್ದ. ಬಹು ಕುಶಲ, ಬುದ್ಧಿವಂತ.

ಅಲ್ಲಿ ಐದು ವರ್ಷ ಇದ್ದ ಮೇಲೆ ಇನ್ನೊಂದು ಬಡ್ತಿ ಪಡೆದು ಮತ್ತೆ ಎಲ್.ಆರ್.ಡಿ.ಇ.ಗೇ ಬಂದೆ. ಈಗ ಗ್ರೇಡ್ I, ಸೀನಿಯರ್ ಸೈಂಟಿಫಿಕ್ ಆಫೀಸರ್ ಅಂತ ಹೆಸರು. ಇಲ್ಲಿ ಒಬ್ಬ ಹೊಸ ನೌಕಾದಳದ ಕಮಾಂಡರ್, ದೇಬ್ ಎಂಬಾತ ಬಂದಿದ್ದ. ಅವನು ನನ್ನನ್ನು ಆಯ್ದು ಕೊಂಡು ಮೆಡಿಕಲ್ ಎಲೆಕ್ಟ್ರಾನಿಕ್ಸ್ ವಿಭಾಗವೊಂದನ್ನು ರಚಿಸಿದ. ಆದರೆ ಇಲ್ಲಿ ನನಗೆ ಮದರಾಸಿನಲ್ಲಿದ್ದ ತೃಪ್ತಿಯ ಮನೋಭಾವ ಬರಲಿಲ್ಲ. ಮದರಾಸಿನಲ್ಲಿದ್ದಾಗ 5/6 ಸಂಶೋಧನಾ ಲೇಖನಗಳನ್ನು ಅಮೆರಿಕದ ಜರ್ನಲ್ ಆಫ್ ಅಪ್ಲೈಡ್ ಫಿಸಿಯಾಲಜಿ ಮೊದಲಾದ ಉತ್ಕೃಷ್ಟವಾದ ಪತ್ರಿಕೆಗಳಲ್ಲಿ ಪ್ರಕಟಿಸಿದೆ. ಕೆಲವು ರಹಸ್ಯ ವರದಿಗಳನ್ನೂ ತಯಾರಿಸಿದೆ. ಕೆಲವು ಹೊಸ ಯಂತ್ರಗಳನ್ನು ನಿರ್ಮಾಣ ಮಾಡಿದೆ. ಎಲ್.ಆರ್.ಡಿ.ಇ.ಯಲ್ಲಿ ಏನು ಮಾಡಿದರೂ ಅದು ಒಂದು ಗುಂಪಿನ ಪ್ರಯತ್ನ, ಗುಂಪಿನ ಸಾಧನೆ.

ಎಲ್.ಆರ್.ಡಿ.ಇ.ಯಲ್ಲಿಯೂ ನನ್ನ ಸಂಗೀತ ಫೈನ್ ಆರ್ಟ್ಸ್ ಸೊಸೈಟಿಯಲ್ಲಿ ಪ್ರಯೋಗವಾಗಿ ನಾನು ಎಲ್ಲರ ಮೆಚ್ಚುಗೆಗೆ ಪಾತ್ರನಾದೆ. ಅಲ್ಲಿ ಇನ್ನೊಂದು ಪ್ರತಿಭೆ ಬೆಳಕಿಗೆ ಬಂತು. ಮೈಸೂರು ಅನಂತಸ್ವಾಮಿ. ಆದರೆ ಅಲ್ಲಿಯೇ ಆತನಿಗೆ ಕುಡಿತದ ಚಟವೂ ಅಂಟಿಕೊಂಡಿತು.

## ಚಲೋ ದಿಲ್ಲೀ

ಪ್ರಮೋಶನ್ ಸಮಯ ಬಂದಿತು. ನನಗೆ ಪ್ರಿನ್ಸಿಪಲ್ ಸೈಂಟಿಫಿಕ್ ಆಫೀಸರ್ ಪದವಿ ಬರುತ್ತದೆ ಎಂದು ಊಹಾಪೋಹಗಳು. ನನ್ನ ಜೊತೆಗೇ ಹೆಚ್. ಎಸ್. ಎಸ್. ಪ್ರಸಾದ್ ಮತ್ತು ಸಿ.ಐ.ಎಲ್.ನ ಜಿ. ಆರ್. ಘೋಷ್ ಇವರ ಹೆಸರುಗಳು. ಜಿ. ಆರ್. ಘೋಷ್ ಸಹ ನಮ್ಮ ಆಶ್ರಮದ ಭಕ್ತ. ಅವನು ಆಗಾಗ ನನಗೆ ಫೋನ್ ಮಾಡಿ ನಮ್ಮ ಪ್ರಮೋಶನ್ ಎಲ್ಲಿಗೆ ಬಂತು ಎಂಬುದರ ವರದಿ ಒಪ್ಪಿಸುತ್ತಿದ್ದ. ಕೊನೆಗೆ ಒಂದು ದಿನ ಫೋನ್ ಮಾಡಿ ನನಗೆ ಪ್ರಮೋಶನ್ ಮೇಲೆ ದೆಹಲಿಗೆ ವರ್ಗಾವಣೆ, ಉಳಿದ ಇಬ್ಬರೂ ಇಲ್ಲಿಯೇ ಉಳಿಯುತ್ತಾರೆ ಎಂಬ ವಿಷಯ ತಿಳಿಸಿದ.

ಹೀಗೆ 1975ರಲ್ಲಿ ದೆಹಲಿಗೆ ಹೊರಟೆ. ದಾರಿಯಲ್ಲಿ ವರ್ಧಾದಲ್ಲಿ ಇಳಿದು ವಿನೋಬಾ ಅವರ ದರ್ಶನವನ್ನೂ ಮಾಡಿ ಅವರೆದುರಿಗೆ ಹಾಡಿ ಮುಂದಕ್ಕೆ ಹೊರಟೆ. ದೆಹಲಿಯಲ್ಲಿ ನನ್ನ ತಮ್ಮ ಸುಬ್ಬರಾವ್ ಗಾಂಧೀ ಶಾಂತಿ ಪ್ರತಿಷ್ಠಾನದಲ್ಲಿ ಇರುತ್ತಿದ್ದ. ಅವನ ವಿಶಾಲವಾದ ಕೋಣೆಯಲ್ಲಿಯೇ ಠಿಕಾಣಿ ಹೂಡಿದೆ. ದೆಹಲಿಯಲ್ಲಿ ನಾನು ರಕ್ಷಣಾ ಇಲಾಖೆಯಲ್ಲಿ ಸೈನ್ಯದ ಮುಖ್ಯಸ್ಥರಿಗೆ ವಿಜ್ಞಾನ ಸಲಹಾಕಾರರ ಸಹಾಯಕ. ಅಲ್ಲಿ ನನ್ನ ಬಾಸ್ ಡಾ. ಮುರ್ಗೈ ಎನ್ನುವವರು, ಸಜ್ಜನರು. ತಮ್ಮ ಕೆಲಸ ತಾವು ಮಾಡುವರು. ಉಳಿದವರ ಗೋಜಿಗೆ ಹೋಗುತ್ತಿರಲಿಲ್ಲ.

ಅಲ್ಲಿನ ಕೆಲಸ ಏನೆಂದರೆ ಸೈನ್ಯಕ್ಕೆ ಬರುವ ಎಲ್ಲ

ವೈಜ್ಞಾನಿಕ ವರದಿ ಸುದ್ದಿ ಪತ್ರಿಕೆಗಳನ್ನು ಓದಿ ಟಿಪ್ಪಣಿ ಮಾಡುವುದು. ಸಭೆ ಮೀಟಿಂಗುಗಳಲ್ಲಿ ಭಾಗವಹಿಸಿ ಸೂಕ್ತ ಸಲಹೆ ಕೊಡುವುದು. ಸೈನ್ಯಾಧಿಪತಿಯ ಕಾರ್ಯಕಾರಿಣಿ ಸಭೆಗಳಲ್ಲಿ ಹಾಜರಿದ್ದು ಭಾಗವಹಿಸುವುದು — ಡಾ. ಮುರ್ಗೈ ರಜೆಯಲ್ಲಿದ್ದಾಗ ನಾನೇ ಈ ಕೆಲಸ ಮಾಡುತ್ತಿದ್ದೆ. ಎಲ್ಲ ಜನರಲ್‌ಗಳು, ಬ್ರಿಗೇಡಿಯರ್‌ಗಳ ನಡುವೆ ನಾನೊಬ್ಬ ಖಾದಿ ಸೂಟ್ ಧರಿಸಿದ ಸಿವಿಲಿಯನ್ ಅಧಿಕಾರಿ. ಅಲ್ಲಿನ ಶಿಸ್ತು, ಸಮಯಪ್ರಜ್ಞೆ ಉಸಿರುಕಟ್ಟಿಸುವಂತಹುದು. ಆದರೆ ಅದು ಸೈನಿಕ ಅಧಿಕಾರಿಗಳಿಗೆ ಸ್ವಾಭಾವಿಕ ಡ್ರಿಲ್.

ಆ ಕಛೇರಿಯಲ್ಲಿ ಅತಿ ಅನುಭವ ಉಳ್ಳವರು ಇಬ್ಬರು ಸಕ್ಸೆನಾ ಎಂಬ ಸೀನಿಯರ್ ಸೈಂಟಿಫಿಕ್ ಆಫೀಸರ್ I, ನೇಗಿ ಎಂಬ ಸೀನಿಯರ್ ಸೈಂಟಿಫಿಕ್ ಆಫೀಸರ್ II. ಇಬ್ಬರೂ ನನಗೆ ಎಲ್ಲ ಸಹಾಯ ಮಾಡುತ್ತಿದ್ದರು. ಒಂದು ಸಲ ಸೈನ್ಯದ ಯುದ್ಧದ ಆಟ ಅಲಮೋಡಾ ನೈನಿತಾಲ್ ಪ್ರದೇಶದಲ್ಲಿ ನಡೆಯಿತು. ನನಗೆ ಭಾಗವಹಿಸಬೇಕು ಎನಿಸಿತು. ಸಕ್ಸೇನಾ ಇದರ ಎಲ್ಲ ವ್ಯವಸ್ಥೆ ಮಾಡಿದ. ಅಲ್ಲಿನ ಮುಖ್ಯಸ್ಥರುಗಳು ನನ್ನನ್ನು ಬಹು ಗೌರವದಿಂದ ನೋಡಿಕೊಂಡರು. ಜನರಲ್ ಕೃಷ್ಣರಾವ್ ಅವರೇ ವಿಚಾರಿಸಿಕೊಂಡರು. ಶಿಬಿರದ ಮುಖ್ಯಸ್ಥ ಜನರಲ್ ಡಯಸ್ ಸದಾ ನನ್ನೊಡನೆ ಇದ್ದು ನನಗೆ ವಿಷಯಗಳನ್ನು ವಿವರಿಸಿದರು. ನನ್ನ ಯೋಗಕ್ಷೇಮ ವಿಚಾರಿಸುತ್ತಿದ್ದರು. ಅದೊಂದು ಅಪೂರ್ವ ಅನುಭವ.

ಯಾವುದಾದರೂ ಮೀಟಿಂಗ್ ಬೆಂಗಳೂರು, ಮೈಸೂರು, ಮದ್ರಾಸ್‌ಗಳಲ್ಲಿ ಇದ್ದರೆ ಅದಕ್ಕೆ ಡಾ. ಮುರ್ಗೈ ನನ್ನನ್ನೇ ಕಳುಹಿಸುತ್ತಿದ್ದರು. ಆದರೆ ಇದೆಲ್ಲ ಬರೀ ಓದಿ-ಬರೆಯುವ ಕೆಲಸ. ಆದರೆ ಇಲ್ಲಿ ವಿಜ್ಞಾನ ಮಂದಿರಗಳ ಹೊರಗೆ, ಸೈನ್ಯದಲ್ಲಿ ಏನಾಗುತ್ತಿದೆ ಎಂಬುದರ ಅರಿವು ಆಯಿತು. ಡೆಲ್ಲಿಯಲ್ಲಿ ಎರಡೂವರೆ, ಮೂರುವರ್ಷ ಆದ ಮೇಲೆ ಪುಣೆಗೆ ಪ್ರೊಫೆಸರ್ ಕೆಲಸಕ್ಕೆ ಹೋಗುವ ಅವಕಾಶ ದೊರೆಯಿತು. ಅಲ್ಲಿಗೆ ಹೋಗುತ್ತೇನೆ ಎಂದೆ — ಈಗಿನದೇ ಸಮನಾದ ಹುದ್ದೆ. ಪ್ರೊಫೆಸರ್ ಕೆಲಸ, ಅದೇ ಸಂಬಳ - ಸ್ಥಾನಮಾನ.

**ಮತ್ತೆ ಅಧ್ಯಾಪಕ**

ನನಗೆ ಪಾಠ ಹೇಳುವ ಕೆಲಸ ಇಷ್ಟ. ಮತ್ತೆ ಅದೇ ಕೆಲಸಕ್ಕೆ ಹಾಜರಾದೆ. ಹಂಸ ನೀರಿಗಿಳಿದ ಹಾಗೆ ಆಯಿತು. ನನ್ನ ಇಲಾಖೆಯಲ್ಲಿ ಉಪಾಧ್ಯಾಯರೆಲ್ಲ ಒಳ್ಳೆ ಜನ. ಅವರಲ್ಲಿ ಹೆಚ್ಚು ಜನರು ರಕ್ಷಣಾ ಸಂಶೋಧನಾ ಸಂಸ್ಥೆಯವರೇ. ಇಬ್ಬರು ಕನ್ನಡಿಗರು ನನಗೆ ಹತ್ತಿರದವರಾದರು. ಆಮೇಲೆ ದೂರದರ್ಶನದಿಂದ ನಿವೃತ್ತನಾದ ನಮ್ಮಣ್ಣ ಶಿವಸ್ವಾಮಿಯೂ ಪುಣೆಗೆ ಬಂದು ಅತ್ತಿಗೆಯೊಡನೆ ನನ್ನ ಮನೆಯಲ್ಲಿರತೊಡಗಿದ.

ಹೀಗೆ ಐದು ವರ್ಷ ಕಳೆದ ಮೇಲೆ ನನ್ನ ಹುದ್ದೆಯ ಗರಿಷ್ಠ ಸಂಬಳವನ್ನು ತೆಗೆದುಕೊಂಡೆ. ಇನ್ನೆರಡು ವರ್ಷ ಸೇವಾ ಅವಧಿ ಇತ್ತು. ಆದರೆ ವರ್ಷಕ್ಕೆ ಒಂದು ಇನ್ಕ್ರಿಮೆಂಟ್ ಇಲ್ಲದೆ ಏಕೆ ಕೆಲಸ ಮಾಡಲಿ ಎಂದುಕೊಂಡು 1982ರಲ್ಲಿ ಕೆಲಸದಿಂದ ನಿವೃತ್ತನಾದೆ. ಬೆಂಗಳೂರಿಗೆ ವಾಪಸ್ ಬಂದೆ, ಪ್ರೊಫೆಸರ್ ಕೆಲಸ ಬಹು ಸಮರ್ಪಕವಾಗಿ ನಡೆಯಿತು. ಸಿ.ಎಂ.ಇ. (ಕಾಲೇಜ್ ಆಫ್ ಮಿಲಿಟರಿ ಎಂಜಿನಿಯರಿಂಗ್)ನ ಅನುಭವ ಸುಖವಾಗಿತ್ತು. ಪುಣೆಯಲ್ಲಿ ಮರಾಠಿ ಅಭಂಗಗಳನ್ನು ಕಲಿತೆ. ದೇಹು, ಆಳಂದಿ, ಪಂಡರಪುರಗಳಿಗೆ ಹೋದೆ.

ಹೀಗೆ ಕಳೆಯಿತು ನನ್ನ ವೃತ್ತಿಜೀವನ. ವಿಜ್ಞಾನದಿಂದ ನನ್ನ ಹೊಟ್ಟೆಪಾಡು ಜರುಗಿತು. ಹಾಗೆಯೇ ವಿಜ್ಞಾನದಲ್ಲಿ ಅಭಿರುಚಿ ಅನುಭವ ತಾನೇ ಬೆಳೆಯಿತು. ದೇಶದ ಹಲವು ಭಾಗಗಳಲ್ಲಿ ವಾಸಿಸಿ ಸಂಚರಿಸುವ ಅವಕಾಶ ದೊರೆಯಿತು. ಆದರೆ ಬೆಂಗಳೂರು ಬಿಟ್ಟಮೇಲೆ ನನ್ನ ಆಶ್ರಮದ ಸಂಬಂಧ ಸ್ವಲ್ಪ ಸಡಿಲಿತು. ದೆಹಲಿಯಲ್ಲಿ ನನ್ನ ತಮ್ಮ ಪಾಪು (ಸುಬ್ಬರಾವ್) ಜೊತೆ ವಾಸ, ಶಿವಸ್ವಾಮಿ ಮನೆಯ ಊಟ, ಪುಣೆಯಲ್ಲಿ ಅಣ್ಣ-ಅತ್ತಿಗೆ ಜೊತೆ ವಾಸ, ಮದರಾಸಿನಲ್ಲಿ ಹೋಟೆಲು ಜೀವನ, ನನಗೆ ಯಾವುದೂ ಅಪ್ರಿಯವಾಗಲಿಲ್ಲ; ಎಲ್ಲ ಇಷ್ಟವೇ. ದೂರದಲ್ಲಿದ್ದರೂ ನನ್ನ ಕುಟುಂಬದ ಯೋಗಕ್ಷೇಮ ಸದಾ ನನ್ನ ಗಮನದಲ್ಲಿ ಇರುತ್ತಿದ್ದಿತು. ಎಲ್.ಆರ್.ಡಿ.ಇ.ಯಲ್ಲಿದ್ದಾಗಲೇ ಕಲ್ಲುಮನೆ ಕಟ್ಟಿದೆ, ಸರ್ಕಾರದ ಸಾಲದ ಸಹಾಯದಿಂದ. ಅದು ನನ್ನ ಕುಟುಂಬದ ಕೇಂದ್ರವಾಯಿತು. ಈಗ ನಾಲ್ವರು ಅಣ್ಣ ತಮ್ಮಂದಿರ ಬೀಡು ಆಗಿದೆ. ಇದೂ ವಿಜ್ಞಾನ-ವೃತ್ತಿಯ ಕೊಡುಗೆಯೇ. ❐

ಆತ್ಮಾವಲೋಕನ - ೩

# ನಾನೇಕೆ ಸಂನ್ಯಾಸಿಯಾಗಲಿಲ್ಲ?

✍ ಪ್ರೊ. ಎನ್. ಕೃಷ್ಣಸ್ವಾಮಿ

**ಬಾ**ಲ್ಯದಲ್ಲಿಯೇ ರಾಮಕೃಷ್ಣ ಮಠದ ಸಂನ್ಯಾಸಿಗಳ ಸಂಸರ್ಗ ಬಂದಿತು. ಸ್ವಾಮಿ ಶ್ರೀವಾಸಾನಂದ, ಸ್ವಾಮಿ ಓಜಸಾನಂದ, ಸ್ವಾಮಿ ಪಾವನಾನಂದ, ಸ್ವಾಮಿ ತ್ಯಾಗೀಶಾನಂದ ಇಂಥ ಮಹಾತ್ಮರ ಪ್ರಭಾವ ಬಾಲಕನಾಗಿದ್ದಾಗಲೇ ನನ್ನ ಜೀವನದಲ್ಲಿ ಪ್ರವೇಶಿಸಿತು. ನಂತರದ ದಿನಗಳಲ್ಲಿ ಪೂಜ್ಯ ಸ್ವಾಮಿ ಯತೀಶ್ವರಾನಂದರ ವ್ಯಕ್ತಿತ್ವವೂ ನನ್ನನ್ನು ಆಕರ್ಷಿಸಿತು.

ಹೀಗೆ ಒಂದು ಕಡೆ ಸಂನ್ಯಾಸಿಗಳ ಆಕರ್ಷಣೆ ಬಲವಾಗಿದ್ದರೆ ಇನ್ನೊಂದು ಕಡೆ ಸಂಸಾರ ಜೀವನದ ದುರ್ಭರತೆಯೂ ನನ್ನ ಮನಸ್ಸನ್ನು ಪ್ರಭಾವಕ್ಕೆ ವಶಪಡಿಸಿತು. ನಮ್ಮ ಮನೆಯಲ್ಲಿ ಬಡತನ ತಾನೇ ತಾನಾಗಿ ವ್ಯಾಪಿಸಿತ್ತು. ಸದಾ ಕಷ್ಟಕಾರ್ಪಣ್ಯ. ಅದು ಮಾತ್ರ ಅಲ್ಲ, ನಮಗೆಲ್ಲ ಆಶ್ರಯ ಕೊಟ್ಟ ನಮ್ಮ ತಾಯಿಯ ಚಿಕ್ಕಮ್ಮ ಮೀನಾಮಣಿಯಮ್ಮನವರ ಜೀವನವನ್ನು ಹತ್ತಿರದಿಂದ ಕಂಡೆ. 'ಚಿಕ್ಕಮ್ಮ' ದಿವಾನ್ ಶೇಷಾದ್ರಿ ಅಯ್ಯರ್ ಅವರ ಸೊಸೆ. ಅವರಿಗೆ ಬಡತನ ಇರಲಿಲ್ಲ. ಆದರೆ ಸಾವು ಅವರ ಕುಟುಂಬದಲ್ಲಿ ತಾಂಡವವಾಡುತ್ತಿತ್ತು. ಗಂಡ ಸತ್ತ, ಮಕ್ಕಳು ಸತ್ತರು. ಇಬ್ಬರು ಅಳಿಯಂದಿರು, ಆಮೇಲೆ ಮೊಮ್ಮಕ್ಕಳು ಹೀಗೆ ಒಬ್ಬೊಬ್ಬರ ಸಾವು ಆ ಸಂಸಾರವನ್ನು ತನ್ನ ಗುರಿಯನ್ನಾಗಿಟ್ಟುಕೊಂಡುಬಿಟ್ಟಿತ್ತು.

ಹೀಗೆ ಚಿಕ್ಕವಯಸ್ಸಿನಲ್ಲೇ ನನಗೆ ಬುದ್ಧನ 'ಸಂಸಾರ ದುಃಖಮಯ' ಎಂಬ ಸತ್ಯ ಮನದಟ್ಟಾಗಿದ್ದಿತು. ನನಗೆ ಮದುವೆ, ಸಂಸಾರ ಜೀವನ ಬೇಡ ಎಂಬ ತೀರ್ಮಾನಕ್ಕೆ ಬಂದೆ. ಆದರೆ ಶ್ರೀರಾಮಕೃಷ್ಣರು ಹೇಳಿದ ಕಾಮಿನೀ ಕಾಂಚನ ತ್ಯಾಗದಲ್ಲಿ ಕಾಮಿನೀ ತ್ಯಾಗದ ವ್ರತವನ್ನು ಎತ್ತಿಕೊಂಡರೂ ನಾನು ಕಾಂಚನವನ್ನು ಆಶ್ರಯಿಸಲೇ ಬೇಕಾಯಿತು. ನಮ್ಮ ಮನೆಯ ಬಡತನ ನಿವಾರಿಸಲು ನೌಕರಿಯ ಮೊರೆಹೋದೆ. ನೌಕರಿ ದೊರೆತ ಮೇಲೆ ಸ್ವಲ್ಪ ನಿರಾಳವಾಗಿ ಉಸಿರಾಡುವ ಹಾಗೆ ಆಯಿತು.

ಗುರುಗಳು, ಸ್ವಾಮಿ ಯತೀಶ್ವರಾನಂದರು ನಾನು ಆಶ್ರಮಕ್ಕೆ ಸೇರುವೆನೆಂದು ನಿರೀಕ್ಷಿಸಿದ್ದರು. ಆಶ್ರಮದೊಡನೆ ನನ್ನ ಸಂಬಂಧ ಎಷ್ಟು ನಿಕಟವಾಗಿತ್ತೆಂದರೆ ಅವರು ಮತ್ತು ಇತರರು ಹಾಗೆ ನಿರೀಕ್ಷಿಸುವುದು ಸ್ವಾಭಾವಿಕವೇ. ಆದರೆ ನಾನು ಒಂದು ದಿನ ಅವರಿಗೆ ನಮ್ಮ ಕುಟುಂಬದ ಸಮಸ್ಯೆಗಳನ್ನು ವಿವರಿಸಿ ನಾನು ಸಂನ್ಯಾಸೀಜೀವನವನ್ನು ಕೈಗೊಳ್ಳುವುದು ಸಾಧ್ಯವಿಲ್ಲ, ಆದರೆ ಬ್ರಹ್ಮಚಾರಿಯಾಗಿಯೇ ಇರುತ್ತೇನೆ ಎಂದು ವಿವರಿಸಿದೆ. ಆಗ ಅವರು ನನಗೆ ಆಶ್ರಮದಲ್ಲಿ ಬ್ರಹ್ಮಚಾರಿಗಳು ಇರುವ ಹಾಗೆಯೇ ಆಶ್ರಮದ ಹೊರಗೂ ಬ್ರಹ್ಮಚಾರಿಗಳು ಬೇಕು ಎಂದರು.

ಆದರೆ ನನ್ನಿಂದ ಅವರಿಗೆ ಒಂದು ಸಮಸ್ಯೆ ಎದುರಾಯಿತು. ಒಂದು ದಿನ ಅವರು ನನಗೆ ಹೇಳಿದರು, "ಕಿಟ್ಟಿ, ನೀನು ಕೆಲವು ಯುವಕರಿಗೆ ತಪ್ಪು ಆದರ್ಶವನ್ನು ತೋರಿಸುತ್ತಿದ್ದೀಯೆ" ಎಂದು. ಅವರ ಇನ್ನೊಬ್ಬ ಶಿಷ್ಯ, ಶೇಷಾದ್ರಿ ಆಶ್ರಮಕ್ಕೆ ಸೇರಿದ್ದ. ಅವನು ಸ್ವಾಮಿಗಳಿಗೆ ಹೇಳಿದನಂತೆ, "ನಾನೂ ಕಿಟ್ಟಿಯ ಹಾಗೆ ಇರುತ್ತೇನೆ" ಎಂದು. ಆಮೇಲೆ ಅವನು ಆಶ್ರಮದಿಂದ ಹೊರಗೆ ಬಂದ. ಬೇರೆ ಗುರುಗಳಿಂದ ಸಂನ್ಯಾಸ ತೆಗೆದುಕೊಂಡು ಸ್ವತಂತ್ರವಾಗಿ ಜೀವಿಸುತ್ತಿದ್ದ. ನಾನು ಮದರಾಸಿನಲ್ಲಿದ್ದಾಗ ಆಗಾಗ ಅವನ ಭೇಟಿ ಆಗುತ್ತಿತ್ತು. ಕೊನೆಗೆ ನಾನು ಕೆನಡಾಗೆ ಹೋದಾಗ ಅಲ್ಲಿ ಅವನು ಬಂದು ನನ್ನನ್ನು ಸಂಧಿಸಿದ. ನನಗಾಗಿ ಅಡುಗೆ ಮಾಡಿ ಪೊಂಗಲ್, ಇತರ ತಿಂಡಿಗಳನ್ನು, ಬಹು ಉಡುಗೊರೆಗಳನ್ನು ತಂದುಕೊಟ್ಟು ತುಂಬಾ ಪ್ರೀತಿಯಿಂದ ಮಾತನಾಡಿಸಿದ. ಆಮೇಲೆ ಅವನು ಅಲ್ಲಿಯೇ ತೀರಿಕೊಂಡ ಸುದ್ದಿ ಬಂದಿತು.

ಹೀಗೆ ನನಗೆ ಸಂಸಾರಜೀವನದ ವಿಷಯದಲ್ಲಿ ಜುಗುಪ್ಸೆ ಉಂಟಾಯಿತು. ಆದರೆ ಸಂನ್ಯಾಸದ ವಿಷಯದಲ್ಲಿ ಆಕರ್ಷಣೆ ಬೆಳೆಯಲಿಲ್ಲ. ಏಕೆಂದರೆ ನಮ್ಮ ಕುಟುಂಬದಲ್ಲಿ ಬಡತನ ಇದ್ದಿತಾದರೂ ಪ್ರೀತಿ, ವಿಶ್ವಾಸಗಳ ಕೊರತೆ

ಇರಲಿಲ್ಲ. ನಮ್ಮಲ್ಲಿ ಮಕ್ಕಳಿಗೆ ಸಂಪೂರ್ಣ ಸ್ವಾತಂತ್ರ್ಯ ಇತ್ತು. ಹಾಗೇ ಮಾಡು, ಹೀಗೇ ಇರು ಎಂದು ಯಾರೂ ನಮಗೆ ಹೇಳಲಿಲ್ಲ. ನಮ್ಮ ತಾಯಿಗೆ ನಾನು ಸಂನ್ಯಾಸಿ ಆಗುವುದು ಮಾತ್ರ ಸುತಾರಾಂ ಇಷ್ಟ ಇರಲಿಲ್ಲ — ಇದನ್ನು ನಾವು ಅನೇಕ ಕುಟುಂಬಗಳಲ್ಲಿ ನೋಡುತ್ತೇವೆ. ಸ್ವಯಂ ಸ್ವಾಮಿ ತ್ಯಾಗೀಶಾನಂದರೇ ಅವರ ತಾಯಿ ಬದುಕಿರುವ ವರೆಗೆ ಸಂನ್ಯಾಸ ತೆಗೆದುಕೊಳ್ಳಲಿಲ್ಲ. ಸ್ವಾಮಿ ಹರ್ಷಾ ನಂದರು, ಸ್ವಾಮಿ ಶಾಸ್ತ್ರಾನಂದರು ಹಟ ಹಿಡಿದು ಸಂಸಾರ ಬಂಧನವನ್ನು ಬಿಡಿಸಿಕೊಂಡು ಆಶ್ರಮಕ್ಕೆ ಬಂದರು.

ನಮ್ಮ ಮನೆಯಲ್ಲಿ ನಾವು ಆರುಮಂದಿ ಅಣ್ಣತಮ್ಮಂದಿ ರಿದ್ದೇವೆ. ಇನ್ನು ಇಬ್ಬರು ಚಿಕ್ಕಂದಿನಲ್ಲೇ ಮೃತ್ಯುವಶ ರಾದರು. ಇವರ ಪೈಕಿ ನಮ್ಮಣ್ಣ ಚಂದ್ರು, ನನ್ನ ತಮ್ಮ ಪಾಪು, ನಾನು ಮೂವರೂ ಬ್ರಹ್ಮಚಾರಿಗಳಾದೆವು. ಉಳಿದ ಮೂವರು ಗೃಹಸ್ಥಾಶ್ರಮಕ್ಕೆ ಕಾಲಿಟ್ಟಿದ್ದಾರೆ.

ಹೀಗೆ ನಾನು ಸಂನ್ಯಾಸಿ ಆಗಲಿಲ್ಲ. ರಾಮಕೃಷ್ಣ ಸಂಘದ ಸದಸ್ಯರು ನಿಷ್ಠುರ ಶಿಸ್ತನ್ನು ಪಾಲಿಸಬೇಕಾಗುತ್ತದೆ. ಹಿರಿಯರ ಆಜ್ಞಾಪಾಲನೆ ಒಂದು ವ್ರತ — ಇದು ನನಗೆ ಸರಿಬೀಳಲಿಲ್ಲ — ನನಗೆ ಸ್ವಾತಂತ್ರ್ಯ ಮುಖ್ಯವಾಯಿತು. ಇನ್ನೊಂದು ವ್ರತ ಬಡತನದ ಜೀವನ ನಡೆಸಬೇಕೆನ್ನುವುದು ನನಗೆ ಭಯವನ್ನುಂಟುಮಾಡಲಿಲ್ಲ — ಏಕೆಂದರೆ ನಮ್ಮ ಮನೆಯ ಬಡತನಕ್ಕೆ ಹೋಲಿಸಿದರೆ ಆಶ್ರಮದ ಜೀವನ ಬಹು ಸುಖಕರವಾಗಿದ್ದಿತು.

ಅಂತೂ ಇಂತೂ ನಾನು ಸಂನ್ಯಾಸಿಯಾಗಲಿಲ್ಲ.

**ಏಕೆ?**

ಜೇಮ್ಸ್ ಥರ್ಬರ್ ಎಂಬ ಪ್ರಸಿದ್ಧ ಅಮೆರಿಕನ್ ಹಾಸ್ಯಲೇಖಕ 'ದಿ ಸೀಕ್ರೆಟ್ ಲೈಫ್ ಆಫ್ ವಾಲ್ಟರ್ ಮಿಟ್ಟಿ' ಎಂಬ ಒಂದು ಅದ್ಭುತ ರಮಣೀಯ ಸಣ್ಣ ಕಥೆ ಬರೆದಿದ್ದಾನೆ. ವಾಲ್ಟರ್ ಮಿಟ್ಟಿ ಒಬ್ಬ ಶ್ರೀಸಾಮಾನ್ಯ. ಅವನಿಗೆ ಯಾವ ಹೆಚ್ಚುಗಾರಿಕೆಯೂ ಇಲ್ಲ, ಬುದ್ಧಿ ವಂತಿಕೆಯೂ ಇಲ್ಲ, ಪರಿಶ್ರಮವೂ, ನೈಪುಣ್ಯವೂ ನಾಸ್ತಿ. ಆದರೆ ಅವನು ಕನಸುಗಾರ, ಹಗಲುಗನಸುಗಾರ.

ಒಂದು ಸಲ ಅವನು ಹಗಲುಗನಸಿನಲ್ಲಿ ಒಬ್ಬ ಅಸಾಧಾರಣ ಸರ್ಜನ್ — ಶಸ್ತ್ರ ವಿಜ್ಞಾನಿಯಾಗಿರುತ್ತಾನೆ. ಒಂದು ಬಹುಕಷ್ಟಕರವಾದ ಆಪರೇಶನ್ ಮಾಡ ಬೇಕಾಗಿರುತ್ತದೆ. ಬೇರೆ ಯಾರಿಗೂ ಅದು ಸಾಧ್ಯವಿಲ್ಲ. ಆದರೆ ಎಲ್ಲರೂ ಡಾಕ್ಟರ್ ವಾಲ್ಟರ್ ಮಿಟ್ಟಿಯನ್ನು ಆಶ್ರಯಿಸುತ್ತಾರೆ. ವಾಲ್ಟರ್ ಮಿಟ್ಟಿ ಕೈಗಳನ್ನು ಸ್ಕ್ರಬ್ ಮಾಡಿಕೊಂಡು, ಗ್ಲೌಸ್ ಧರಿಸಿ, ಮುಖವಾಡ ಹಾಕಿ ಕೊಂಡು ಅಲ್ಪಕಾಲದಲ್ಲಿಯೇ ಆ ಶಸ್ತ್ರಚಿಕಿತ್ಸೆಯನ್ನು ಲೀಲಾಜಾಲವಾಗಿ ಮಾಡುತ್ತಾನೆ.

ಹೀಗೆಯೇ ಒಂದು ಸಲ ಅವನು ಒಬ್ಬ ಏರೋ ಎಂಜಿನಿಯರ್. ಆ ಕನಸಿನಲ್ಲಿ ಅವನಿಲ್ಲದೆ ಒಂದು ವಿಮಾನ ಹಾರುವುದೇ ಇಲ್ಲ. ಅವನು ಮುಟ್ಟಿದರೆ ಸಾಕು, ಅದು ಸರಿಹೋಗುತ್ತದೆ. ಹೀಗೆಯೇ ಮಿಟ್ಟಿಯ ಹಲವು ಕನಸುಗಳನ್ನು ಥರ್ಬರ್ ಸುಂದರವಾಗಿ ಚಿತ್ರಿಸಿದ್ದಾನೆ.

ಕಿಟ್ಟಿಯ ಜೀವನವೂ ಸ್ವಲ್ಪ ಹೀಗೆಯೇ. ಕಿಟ್ಟಿ ಒಬ್ಬ ವಾಲ್ಟರ್ ಮಿಟ್ಟಿ.

ನಾನೊಬ್ಬ ಶ್ರೇಷ್ಠ ಸಂಗೀತಗಾರನಾಗುವ ಕನಸು ಯಾವಾಗಲೋ ಕಂಡಿದ್ದೆ. ಆದರೆ ಅದದ್ದೇನು? ಸಾಧಾರಣ ಹಾಡುಗಾರನಾದೆ. ಆದರೆ ದೇವರ ದಯೆ ಯಿಂದ ಹತ್ತು ಹನ್ನೆರಡು ವರ್ಷಗಳು ಬೆಂಗಳೂರು ರಾಮಕೃಷ್ಣ ಆಶ್ರಮದ ಭಜನೆಯಲ್ಲಿ ಮುಖ್ಯಸ್ಥನಾಗಿ ಸೇವೆ ಮಾಡಿದೆ. ಸಹಸ್ರಾರು ಜನರಿಗೆ ಭಜನ ಸಂಗೀತವನ್ನು ಹೇಳಿಕೊಡುವ ಭಾಗ್ಯ ನನಗೆ ದೊರೆಯಿತು. ಹಾಡುವ ಆನಂದ ವಿಪುಲವಾಗಿ ದೊರೆಯಿತು.

ಒಂದು ಕಾಲದಲ್ಲಿ ನಾನು ವಿಜ್ಞಾನಿಯಾಗಿ ಏನ ನ್ನಾದರೂ ಸಾಧಿಸುವೆನೆಂದು ಕನಸು ಕಂಡಿದ್ದೆ. ನನಗಿಂತ ಹೆಚ್ಚಾಗಿ ಗುರುಗಳು, ಸ್ವಾಮಿ ಯತೀಶ್ವರಾನಂದರು ನಿರೀಕ್ಷಿಸಿದ್ದರು. ಅವರು ಅಮೆರಿಕದಲ್ಲಿ ಪ್ರಸಿದ್ಧ ಭಾರ ತೀಯ ಸೌಂಡ್ ಎಂಜಿನಿಯರ್ ಬೋಸ್ ಎಂಬಾತನನ್ನು ನೋಡಿದ್ದರು. ಅವನು ಅದ್ಭುತವಾದ ಲೌಡ್‌ಸ್ಪೀಕರ್ ಗಳನ್ನು ತಯಾರಿಸಿ ವಿಶ್ವವಿಖ್ಯಾತನಾದ — ಅವನ ಹಾಗೆಯೇ ನಾನೂ ಏಕೆ ಏನನ್ನಾದರೂ ಸಾಧಿಸಬಾರದು ಎಂದು ಸ್ವಾಮೀಜಿ ಯೋಚಿಸಿದುದು ಉಂಟು. ಆದದ್ದೇನು? ನಾನೊಬ್ಬ ಬಹುಸಾಧಾರಣವಾದ ವಿಜ್ಞಾನಿ ಯಾದೆ.

ನಾನೊಬ್ಬ ಪ್ರಸಿದ್ಧ ಸಂನ್ಯಾಸಿಯೂ ಆಗಿ ವಿವೇಕಾನಂದರ ಹಾಗೆ ವಿಜೃಂಭಿಸಲಿಲ್ಲ — ಆದರೆ ಶ್ರೀರಾಮಕೃಷ್ಣ ಗುರುಗಳ ಒಬ್ಬ ಸಾಧಾರಣ ಭಕ್ತನಾಗುವ ಭಾಗ್ಯ ನನ್ನದು.

ನಾನು ಸ್ವಾತಂತ್ರ್ಯ ಹೋರಾಟದಲ್ಲಿಯೂ ಭಾಗ ವಹಿಸಿದೆ. ಅನೇಕ ಮೆರವಣಿಗೆಗಳನ್ನು ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಬೆಂಗಳೂರಿನ ಬೀದಿಬೀದಿಗಳಲ್ಲಿ ನಡೆ ಸಿದೆ. ಹಲವು ಸಭೆಗಳಲ್ಲಿ ರಾಷ್ಟ್ರಪ್ರೇಮದ ಗೀತೆಗಳನ್ನು ಹಾಡಿದೆ. ಆದರೆ ಎಂದೂ ಪ್ರಸಿದ್ಧನಾಗಲಿಲ್ಲ. ಸ್ವಾತಂತ್ರ್ಯ ಸಂಗ್ರಾಮದ ಸಾಮಾನ್ಯ ಸಿಪಾಯಿಯಾಗಿಯೇ ಉಳಿದೆ.

ಚಿಕ್ಕವಯಸ್ಸಿನಲ್ಲಿಯೇ ಆತ್ಮಸಾಕ್ಷಾತ್ಕಾರದ ಆಸೆಯನ್ನು ಹೊತ್ತೆ. ದೇವರ ದರ್ಶನ ಆದೀತೆ ಎಂದು ಸಾಧನೆಯಲ್ಲಿ ತೊಡಗಿದೆ. ಆದರೆ ದೇವರು ಇನ್ನೂ ದೂರದ ಮರೀಚಿಕೆ ಯಾಗಿಯೇ ಇದ್ದಾನೆ.

ಎಂದೂ ನಾನು ಹೆಚ್ಚಿನ ಹಣ, ಸ್ಥಾನ-ಮಾನಗಳಿಗೆ ಆಸೆಪಡಲಿಲ್ಲ. 'ಧನ ನಹಿ ಮಾಗೂ ಮಾಗೂ ನ ಸತ್ತಾ, ನಹಿ ಮಾಗೂ ವಿಷಯನಕೀ ಮಮತಾ' ('ನಾನು ಧನ ಬೇಡುವುದಿಲ್ಲ, ಸ್ಥಾನಬಲ ಬೇಡುವುದಿಲ್ಲ, ವಿಷಯಗಳ ಸುಖವನ್ನೂ ಬೇಡುವುದಿಲ್ಲ'). ಇವು ಯಾವುವೂ ನನ್ನನ್ನು ಮುಟ್ಟಲೂ ಇಲ್ಲ.

ಲೇಖಕನಾಗಿ ಹಲವು ಪುಸ್ತಕ ಬರೆದೆ. ಲೇಖನಗಳನ್ನು ಬರೆದೆ. ಯಾವುದೂ ಪ್ರಸಿದ್ಧಿ ಪಡೆಯಲಿಲ್ಲ.

ಒಂದೇ ಗುರಿಯನ್ನು ಹೊಂದಿ ಅದನ್ನು ಸಾಧಿಸಲು ಉಳಿದ ಎಲ್ಲವನ್ನೂ ಬಿಟ್ಟು ಶ್ರಮಿಸಿದ್ದರೆ ಏನಾದರೂ ಸಾಧಿಸುತ್ತಿದ್ದನೇನೋ? ಆದರೆ ಇದೆಲ್ಲ ಶ್ರಮದಿಂದ ಮಾತ್ರ ಸಾಧ್ಯವಲ್ಲ. 'ದೈವಂ ಚೈವ' — ದೈವಾನುಗ್ರಹವೂ ಬೇಕು.

**ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ।**
**ಬಹುಶಾಖಾಹ್ಯನಂತಾಶ್ಚಬುದ್ಧಯೋಽವ್ಯವಸಾಯಿನಾಂ॥**

ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಅರ್ಜುನನಿಗೆ ಹೇಳುತ್ತಾನೆ: ಅರ್ಜುನಾ, ವ್ಯವಸಾಯಾತ್ಮಕವಾದ ಬುದ್ಧಿ ಏಕಮುಖ ವಾದದ್ದು, ಅವ್ಯವಸಾಯಿಗಳ ಬುದ್ಧಿ ಬಹುಶಾಖೆಗಳನ್ನು ಹೊಂದಿ ಅನಂತವಾಗುತ್ತದೆ.



ನಾನೊಬ್ಬ ಅವ್ಯವಸಾಯಿ!

* * * * *

---

*ನಿಮ್ಮಲ್ಲಿ ಭಾವನಾಶಕ್ತಿಯು ಸ್ವಲ್ಪವೂ ಇಲ್ಲದಿದ್ದರೆ, ಮತ್ತು ನಿಮಗೆ ಮಾರ್ಗದರ್ಶಿಯಾದ ಒಂದು ಆದರ್ಶವೇ ಇಲ್ಲದಿದ್ದರೆ ನೀವು ಮೃಗಗಳಿಗಿಂತ ಹೆಚ್ಚೇನೂ ಅಲ್ಲ. ಆದ್ದರಿಂದ ನೀವು ಅತ್ಯುಚ್ಚವಾದ ಆದರ್ಶವನ್ನು ನಿಮ್ಮ ಮುಂದಿಟ್ಟುಕೊಳ್ಳಿರಿ. ಆದರ್ಶವನ್ನೆಂದಿಗೂ ತಗ್ಗಿಸಬೇಡಿರಿ; ಹಾಗೆಂದು ಆದರ್ಶವಾದಿಗಳಾಗುವ ಭರದಲ್ಲಿ ವ್ಯವಹಾರ-ಕೌಶಲವನ್ನು, ಕಾರ್ಯದಕ್ಷತೆಯನ್ನು ಕಡೆಗಣಿಸದಿರಿ. ಕಟ್ಟುನಿಟ್ಟಿನ ಆದರ್ಶಪರತೆ ಹಾಗೂ ಪ್ರಚಂಡ ಕಾರ್ಯದಕ್ಷತೆ — ಇವೆರಡನ್ನೂ ನೀವು ಸಮರಸವಾಗಿ ಮೈಗೂಡಿಸಿಕೊಳ್ಳುವುದನ್ನು ಕಲಿಯಬೇಕು.*

* * * * *

*ಭವಿಷ್ಯದ ಕುರಿತಾದ ನನ್ನ ಭರವಸೆ ಇರುವುದು ಶೀಲವಂತರಾದ ಯುವಜನರಲ್ಲಿ — ಮೇಧಾವಿಗಳೂ, ವಿಧೇಯರೂ, ಬಹುಜನಹಿತಕ್ಕಾಗಿ ತಮ್ಮೆಲ್ಲವನ್ನೂ ತ್ಯಾಗಮಾಡಬಲ್ಲವರೂ ಆದ ಯುವಜನರಲ್ಲಿ! ನನ್ನ ಯೋಜನೆಗಳನ್ನು ಕಾರ್ಯಗತಗೊಳಿಸಲು ತಮ್ಮ ಜೀವನವನ್ನೇ ಯಾರು ಮುಡಿಪಾಗಿಡಬಲ್ಲರೋ ಮತ್ತು ತನ್ಮೂಲಕ ತಮ್ಮನ್ನು ತಾವು ಉದ್ಧರಿಸಿಕೊಳ್ಳುತ್ತ ಯಾರು ರಾಷ್ಟ್ರೋದ್ಧಾರಕ್ಕಾಗಿಯೂ ಶ್ರಮಿಸಬಲ್ಲರೋ ಅಂಥ ಯುವಜನರಲ್ಲೇ ನನ್ನ ಭರವಸೆ ಇರುವುದು. ಇಂತಹ ಗುಣಗಳಿಲ್ಲದ ಸಾಮಾನ್ಯ ಮಟ್ಟದ ಯುವಕರೇನೋ ತಂಡೋಪತಂಡವಾಗಿ ಬರುತ್ತಿದ್ದಾರೆ; ಮುಂದೆಯೂ ಬರುತ್ತಾರೆ, ಅಂಥವರಿಗೇನೂ ಕೊರತೆಯಿಲ್ಲ. ಆದರೆ ಅವರ ಮುಖದಲ್ಲಿ ಜೀವಕಳೆಯೇ ಇರುವುದಿಲ್ಲ — ಅವರ ಹೃದಯವೋ ಬಲಹೀನ, ಅವರ ಶರೀರವೋ ಶಕ್ತಿಹೀನ, ಅವರ ಮನಸ್ಸೋ ಸತ್ತ್ವಹೀನ. ಅವರಲ್ಲಿ ಕೆಲಸಮಾಡುವ ತ್ರಾಣವೇ ಇಲ್ಲ. ಇಂಥವರಿಂದ ಏನಾದೀತು*

**- ಸ್ವಾಮಿ ವಿವೇಕಾನಂದ**



# ಆದರ್ಶಜೀವಿ – ಕೃಷ್ಣಸ್ವಾಮಿ

✍ ಎಸ್. ವಿ. ಶ್ರೀನಿವಾಸರಾವ್

**ನಾ**ನು ಪ್ರೊ. ಕೃಷ್ಣಸ್ವಾಮಿಯವರನ್ನು ಸುಮಾರು 16 ವರ್ಷದಿಂದ ಬಲ್ಲೆ. ಸಿ.ಕ್ಯೂ.ಎ.ಎಲ್.ನಿಂದ ನಾನು ನಿವೃತ್ತಗೊಂಡನಂತರ (1990) ಗವಿಗಂಗಾಧರೇಶ್ವರ ದೇವಸ್ಥಾನದ ಬಳಿಯ ತಿಮ್ಮೇಶಪ್ರಭು ಉದ್ಯಾನವನಕ್ಕೆ ವಾಯುಸಂಚಾರಕ್ಕಾಗಿ (ವಾಕಿಂಗ್) ಹೋಗಲು ಪ್ರಾರಂಭಿಸಿದ್ದೆ. ಒಂದು ದಿನ ಅವರ ಪ್ರಥಮ ಭೇಟಿಯಾಯಿತು. ಬೆಳಗಿನ ಜಾವದಲ್ಲಿ ಎದ್ದು ಅವರು ದೇವರನಾಮ, ಶ್ಲೋಕಗಳನ್ನು ಗಟ್ಟಿಯಾಗಿ ಹೇಳಿಕೊಳ್ಳುತ್ತ ಹರಿಹರೇಶ್ವರ ದೇವಾಲಯದ ಸುತ್ತ ಸುತ್ತುತ್ತಿದ್ದಾಗ ನಾನಾಗಿ ಅವರಲ್ಲಿ ನನ್ನ ಪರಿಚಯವನ್ನು ಮಾಡಿಕೊಂಡೆನೋ ಅಥವಾ ನನ್ನ ಆತ್ಮೀಯರಾದ ಶ್ರೀ ಜಿ. ನಾರಾಯಣರವರು ನನ್ನ ಪರಿಚಯ ಮಾಡಿಸಿದರೋ ಸರಿಯಾಗಿ ನೆನಪಿಲ್ಲ. ಅಂದಿನಿಂದ ಒಂದು ದಿನವೂ ತಪ್ಪದೆ ನಾನು ಬೆಳಗಿನ ಜಾವ ಅವರನ್ನು ಆ ಉದ್ಯಾನವನದಲ್ಲಿ ಭೇಟಿಯಾಗುತ್ತಿದ್ದೇನೆ. ನಮಸ್ಕಾರ ಎನ್ನುತ್ತೇವೆ. ವಿಶೇಷ ವಿಷಯವೇನಾದರೂ ಇದ್ದರೆ ವಿನಿಮಯಮಾಡಿಕೊಳ್ಳುತ್ತೇವೆ. ಇಲ್ಲವೇ ನಮ್ಮ ದಿನಚರಿ ಮುಂದುವರಿಯುತ್ತಿರುತ್ತದೆ. ಈ ಪರಿಚಯ ದಿನ ದಿನಕ್ಕೆ ಆತ್ಮೀಯವಾಗಿ ಬೆಳೆದಿದೆ.

**ಆಧ್ಯಾತ್ಮಿಕ ಜೀವನ**

ಕೃಷ್ಣಸ್ವಾಮಿಗಳ ಅಭಿಮಾನಿಗಳು ಮತ್ತು ವಿದ್ಯಾರ್ಥಿವೃಂದ ಅವರನ್ನು ಪ್ರೀತಿಯಿಂದ 'ಕಿಟ್ಟಿಮಾಸ್ಟರ್' ಎಂದು ಕರೆಯುತ್ತಾರೆ. ನನಗೆ ಅವರು ಗೌರವಾನ್ವಿತ ಅಣ್ಣನಂತಿದ್ದಾರೆ. ಅವರ ನಡವಳಿಕೆಗಳನ್ನು ಗಮನಿಸಿದಾಗ ನನಗೆ, ನಮ್ಮ ಮನೆಗೆ ಗುರುಪ್ರಾಯರಾಗಿದ್ದ ಕಲ್ಲೂರಿನ ಸತ್ಯನಾರಾಯಣ ಜೋಯಿಸ್ (ಕೆ. ಎಸ್. ಜೋಯಿಸ್) ರವರೇ ನೆನಪಿಗೆ ಬರುತ್ತಾರೆ. ಅವರು ಮದುವೆಯಾಗಿಯೂ ಬ್ರಹ್ಮಚಾರಿ ಜೀವನ ನಡೆಸುತ್ತಿದ್ದರು. ಇವರು ಬ್ರಹ್ಮಚಾರಿಯಾಗಿಯೇ ಬೆಳೆದು, ಹಾಗೆಯೇ ಉಳಿದು ಬಂದಿದ್ದಾರೆ. ಇಬ್ಬರಿಗೂ ಆಧ್ಯಾತ್ಮಿಕ ಜೀವನ ಅತಿ ಪ್ರೀತಿಯಾದ ಕ್ಷೇತ್ರ. ಅವರು ಕಲ್ಲೂರಿನ ರಾಮದೇವರ ದೇವಸ್ಥಾನ ಕಟ್ಟಿ, ರಾಮೋತ್ಸವ ನಡೆಸುವಲ್ಲಿ ಸಂತೋಷ ಕಾಣುತ್ತಿದ್ದರು. ಇವರು ವಿದ್ಯಾರ್ಥಿಗಳಿಗಾಗಿ ಶಾಲೆ ಸ್ಥಾಪಿಸಿ ಅದನ್ನು ಆದರ್ಶ ರೀತಿಯಲ್ಲಿ ನಡೆಸಿಕೊಂಡು ಹೋಗುವಲ್ಲಿ ತೃಪ್ತಿಯನ್ನು ಅನುಭವಿಸುತ್ತಿದ್ದಾರೆ. ಆದರ್ಶದ ಎರಡು ಮುಖಗಳೂ ಆದರಣೀಯ ಹಾಗೂ ಅನುಕರಣೀಯ.

**ಸಾಹಿತ್ಯಾಸಕ್ತಿ**

ಶ್ರೀಕೃಷ್ಣಸ್ವಾಮಿಯವರಿಗೆ ಆಧ್ಯಾತ್ಮಿಕತೆಯಲ್ಲಿ ಇರುವಷ್ಟೇ ಆಸಕ್ತಿ ಹಾಗೂ ಪ್ರೇಮ, ಸಾಹಿತ್ಯದಲ್ಲೂ ಇದೆ. ತುಂಬಾ ಓದುತ್ತಾರೆ. ಓದಿದ್ದನ್ನು ಅರಗಿಸಿಕೊಂಡು ತಮ್ಮದೇ ರೂಪ ಕೊಟ್ಟು, ತಮ್ಮದೇ ವಿಚಾರಧಾರೆಯನ್ನು ಸಾಹಿತ್ಯಕೃತಿಯಲ್ಲಿ ಪಡಿಮೂಡಿಸುತ್ತಿರುತ್ತಾರೆ. ಅವರು ಏನೇ ಬರೆದರೂ ಅದನ್ನು ನನ್ನೊಡನೆ ಹೇಳಿಕೊಳ್ಳುತ್ತಾರೆ. ವಿಚಾರವಿನಿಮಯಮಾಡಿಕೊಳ್ಳುತ್ತಾರೆ. ನಾನೂ ಅಷ್ಟೆ, ನನ್ನ ಬಹಳಷ್ಟು ಕೃತಿಗಳನ್ನು ಅವರಿಗೆ ನೀಡಿದ್ದೇನೆ. ಸ್ಪಷ್ಟ ಅಭಿಪ್ರಾಯಗಳನ್ನು ನಿರ್ವಂಚನೆಯಿಂದ ನನಗೆ ಹೇಳುತ್ತಾರೆ. ಇತಿ-ಮಿತಿಗಳನ್ನು ತಿಳಿಸುವಲ್ಲಿ ಕೊಂಚವೂ ಅಂಜುವುದಿಲ್ಲ. ಪ್ರಾರಂಭಿಸಲು ಹಿಂದುಮುಂದು ನೋಡುವುದಿಲ್ಲ. ತಮ್ಮ ಪಾರದರ್ಶಕ ಜೀವನದಂತೆಯೇ ಪಾರದರ್ಶಕ ಅಭಿಪ್ರಾಯ ಅವರದು. ಈ ದಿಟ್ಟತನವೇ ಅವರ ಜೀವನದ ನಿಲುವು.

ಉಪನ್ಯಾಸಕರಾಗಿ ವೃತ್ತಿಜೀವನ ಪ್ರಾರಂಭಿಸಿದ ಶ್ರೀಯುತರು ನಿಮ್ಹಾನ್ಸ್‌ನಲ್ಲಿ ವಿಜ್ಞಾನಿಯಾಗಿ, ನಂತರ ರಕ್ಷಣಾ ಇಲಾಖೆ 'ಎಲ್.ಆರ್.ಡಿ.ಇ.'ಯಲ್ಲಿ ತಂತ್ರಜ್ಞರಾಗಿ ಹೀಗೆ ವಿದ್ಯುನ್ಮಾನ ಮತ್ತು ವೈದ್ಯಕೀಯ ಕ್ಷೇತ್ರಗಳಲ್ಲಿ ಅಮೂಲ್ಯ ಸೇವೆಸಲ್ಲಿಸಿದ್ದಾರೆ. ಬೋಧನೆಯಲ್ಲಿ ಆಸಕ್ತಿ ಬೆಳೆಸಿಕೊಂಡಿದ್ದ ಇವರು ಪುಣೆಯಲ್ಲಿ ಮತ್ತೆ ಪ್ರಾಧ್ಯಾಪಕರಾಗಿ ಕೆಲಕಾಲ ಸೇವೆಸಲ್ಲಿಸಿ, ಇವೆಲ್ಲದರಿಂದ ಬೇಸತ್ತು ಸ್ವಯಂ ನಿವೃತ್ತಿ ಪಡೆದು ತಮಗೆ ಆಪ್ಯಾಯಮಾನವಾದ ಸೇವಾಕ್ಷೇತ್ರ ಪ್ರವೇಶಿಸಿದ್ದಾರೆ.

## ದೈವಭಕ್ತ ಕುಟುಂಬ

ಇವರು ಹುಟ್ಟಿ ಬೆಳೆದದ್ದು ದೇವರು ಸರ್ವಜ್ಞಾನಿ, ಸರ್ವಶಕ್ತ, ಸರ್ವವ್ಯಾಪಿ, ಜ್ಞಾನ ಆನಂದಗಳ ಸ್ವರೂಪ ಎಂದು ನಂಬಿದ್ದ ದೈವಭಕ್ತ ಕುಟುಂಬದಲ್ಲಿ. ವಾಂಶಿಕವಾಗಿ ಅಧ್ಯಾತ್ಮಪ್ರವೃತ್ತಿ ಬಾಲ್ಯದಿಂದಲೇ ಮೈಗೂಡಿತ್ತು. ಸುಮಧುರ ಕಂಠಸಿರಿ ಸೋದರಮಾವ ಕೃಷ್ಣಭಾಗವತರಿಂದ ಬಳುವಳಿಯಾಗಿ ಬಂದಿತ್ತು. ಇದನ್ನು ತಮ್ಮದೇ ಮೂಸೆ ಯಲ್ಲಿ ಸಂಸ್ಕರಿಸಿ ಪ್ರಾರ್ಥನಾಮಾಧ್ಯಮವೊಂದನ್ನು ಸೃಷ್ಟಿಸಿ ದರು. ಪ್ರಾರ್ಥನೆ ಹೃದಯದ ಸಂಗೀತ (ಖಲೀಲ್ ಗಿಬ್ರಾನ್), ಪ್ರಾರ್ಥನೆ ಎಂದರೆ ಹೃದಯದಲ್ಲಿರುವ ಪರಮಾತ್ಮನನ್ನು ಕರೆಯುವುದು (ಸ್ವಾಮಿ ವಿವೇಕಾನಂದ), ಪ್ರಾರ್ಥನೆ ಸಾಧಿಸದ ಕಾರ್ಯವೊಂದಿಲ್ಲ (ಕುವೆಂಪು) ಎಂದೇ ನಂಬಿದ್ದ ಇವರು ಎಲ್ಲೆಡೆ ಪ್ರಸ್ತುತಪಡಿಸಲು ಪ್ರಾರಂಭಿಸಿದರು. ಈ ಭಕ್ತಿಪರ ಭಜನೆಯಿಂದ ದೇಶಾ ದ್ಯಂತ ಅಲ್ಲದೆ ಹೊರದೇಶಗಳಲ್ಲೂ ಆಸ್ತಿಕರನ್ನು ಧಾರ್ಮಿಕ ಸಮ್ಮೋಹನಾಸ್ತ್ರದಿಂದ ಬಂಧಿಸಲು ಶಕ್ತರಾಗಿದ್ದಾರೆ. ನಾಲ್ಕು ಬಾರಿ ಅಮೆರಿಕಕ್ಕೆ ಭೇಟಿ ನೀಡಿ ನೂರಾರು ಕಡೆ ಭಜನಾ ಗೋಷ್ಠಿಗಳನ್ನು ನಡೆಸಿ ಧಾರ್ಮಿಕಪ್ರಜ್ಞೆ ಹಾಗೂ ದೈವಭಕ್ತಿ ಯನ್ನು ಉದ್ದೀಪನಗೊಳಿಸುವಲ್ಲಿ ಯಶಸ್ವಿಯಾಗಿದ್ದಾರೆ. ಇದೇ ಇವರ ವಿಶಿಷ್ಟ ಶಕ್ತಿ, ಇದೇ ಇವರ ಹಿರಿಮೆ. ಅಲ್ಲಿ ಸಂಗ್ರಹಿಸಿದ ಸಹಸ್ರಾರು ಡಾಲರನ್ನು ಶ್ರೀವಿವೇಕಾನಂದ ಶೈಕ್ಷಣಿಕ ಸಂಸ್ಥೆಯ ಪ್ರಗತಿಗಾಗಿ ಉಪಯೋಗಿಸಿರುವುದು ಇವರ ಆದರ್ಶ ಜೀವನದ ಉದಾತ್ತತೆಯನ್ನು ಪ್ರತಿ ಬಿಂಬಿಸುತ್ತದೆ.

## ವಿಭಿನ್ನ ವ್ಯಕ್ತಿತ್ವ

ಆಧ್ಯಾತ್ಮಿಕತೆಯನ್ನೇ ಮೈತುಂಬಿಕೊಂಡಿರುವ ಈ ವಿಜ್ಞಾನಿ; ಶಿಕ್ಷಕನಾಗಿ, ಗಾಯಕನಾಗಿ, ಗಾಂಧಿತತ್ತ್ವ ಆರಾಧಕನಾಗಿ, ಸೃಜನಾತ್ಮಕ, ಸೃಜನೇತರ ಸಾಹಿತಿ ಯಾಗಿಯೂ ಸಹ ವಿಭಿನ್ನ ವ್ಯಕ್ತಿತ್ವ ಮೆರೆದಿದ್ದಾರೆ. ಸಾಹಿತ್ಯಾಸಕ್ತಿ ಹಾಗೂ ಸಾಹಿತ್ಯಾರಾಧನೆ ಇವರ ಕುಟುಂಬ ದಲ್ಲಿ ಎದ್ದುಕಾಣುತ್ತಿರುವ ಮಹತ್ತ್ವದ ಅಂಶ ಎಂಬುದು ಇವರ ಇತರ ಸಹೋದರರನ್ನು ನೆನೆದರೆ ಅರ್ಥವಾಗು ತ್ತದೆ. ಇವರ ಒಬ್ಬ ಸಹೋದರ ಎಸ್. ಎನ್. ಶಿವಸ್ವಾಮಿ ಖ್ಯಾತ ಲೇಖಕ. ಹಾಸ್ಯವಿಡಂಬನೆ ಸಾಹಿತ್ಯ ಕ್ಷೇತ್ರದಲ್ಲಿ ಉತ್ತುಂಗಶಿಖರ ಏರಿ ನಿಂತಿದ್ದಾರೆ. ಇನ್ನೊಬ್ಬ ಸಹೋದರ ಶ್ರೀ ಚಂದ್ರಶೇಖರ್ ಸ್ವಾತಂತ್ರ್ಯ ಹೋರಾಟಗಾರ ಹಾಗೂ ನುರಿತ ಲೇಖಕ. ಮತ್ತೊಬ್ಬ ಸಹೋದರ ಸುಬ್ಬರಾವ್ ಗಾಂಧಿ ಸ್ಮಾರಕ ನಿಧಿ ಸಂಸ್ಥೆಗಾಗಿ ಜೀವನವನ್ನೇ ಮುಡುಪಾಗಿರಿಸಿರುವ ಕರ್ಮಯೋಗಿ. (ನಮ್ಮ ಪ್ರಕಾಶನ ಸಂಸ್ಥೆ 'ಸೌರಭ ಪ್ರಕಾಶನ'ಕ್ಕೆ ಫೆಡರೇಷನ್ ಆಫ್ ಇಂಡಿಯನ್ ಪಬ್ಲಿಷರ್ಸ್ ವತಿಯಿಂದ ಬಹುಮಾನ ಬಂದಾಗ ನಾವು ದೆಹಲಿಯ ಗಾಂಧಿ ಸ್ಮಾರಕಭವನದಲ್ಲಿ ತಂಗಿದ್ದಾಗ ಇವರನ್ನು ಅಲ್ಲಿ ಭೇಟಿ ಮಾಡಿದ್ದೆವು) (1999).

ಈ ಸಮಾಜ ಸೇವಕನ ಆಶೋತ್ತರಗಳಿಗೆ ಹಾಲಿಗೆ ಜೇನಾಗಿ ನಿಸ್ಪೃಹ ವ್ಯಕ್ತಿತ್ವದ ಇನ್ನೊಬ್ಬ ಆದರ್ಶ ಜೀವಿ ಎಚ್. ಎನ್. ಸೋಮಸುಂದರಂ ಸೇರಿಕೊಂಡಿದ್ದಾರೆ. ಜನಸೇವೆಯನ್ನೇ ಜನಾರ್ದನ ಸೇವೆಯೆಂದು ಪರಿಗಣಿಸಿ ರುವ ಇವರು ಸಿ.ಐ.ಎಲ್. (ರಕ್ಷಣಾಇಲಾಖೆ)ಯಲ್ಲಿ ನನ್ನ ಸಹೋದ್ಯೋಗಿ, ಉನ್ನತ ಹುದ್ದೆಯಲ್ಲಿದ್ದರು. ಅವರು ಅದನ್ನೇ ಬಿಟ್ಟು ಸ್ವಯಂ ನಿವೃತ್ತಿ ಘೋಷಿಸಿಕೊಂಡು ಅಹರ್ನಿಶಿ ಬಿಳಿಗಿರಿರಂಗನ ಬೆಟ್ಟದ ಗಿರಿಜನರ ಸೇವೆಗಾಗಿ ಡಾ. ಸುದರ್ಶನ್‌ರವರಿಗೆ ಬೆನ್ನೆಲುಬುಬಾಗಿ ನಿಂತು, ಹಲವು ವರ್ಷ ನಿಸ್ಪೃಹ ಸೇವೆ ಸಲ್ಲಿಸಿ ಇದೀಗ ಕೃಷ್ಣಸ್ವಾಮಿ ಯವರಿಂದ ಪ್ರಭಾವಿತರಾಗಿ ಸ್ವಾಮಿ ವಿವೇಕಾನಂದ ಶೈಕ್ಷಣಿಕ ಸಂಸ್ಥೆಯ ಉಪಾಧ್ಯಕ್ಷರಾಗಿ ಸೇವೆಸಲ್ಲಿಸುತ್ತಿದ್ದಾರೆ. Birds of the same feather flock together ಎಂಬ ನಾಣ್ನುಡಿಯನ್ನು ಇದು ಪುಷ್ಟೀಕರಿಸುತ್ತದೆ.

## ಬಹುಶ್ರುತ ಸೇವೆ

ಶ್ರೀಕೃಷ್ಣಸ್ವಾಮಿಯವರು ಉದ್ಯಾನವನದಲ್ಲಿ ಪ್ರತಿ ಸೋಮವಾರ ಬೆಳಗ್ಗೆ ವಾಯುಸಂಚಾರಕ್ಕೆ ಅಲ್ಲಿಗೆ ಬರುವ ಮಿತ್ರರೊಡನೆ ಸೇರಿ ಭಜನಾ ಕಾರ್ಯಕ್ರಮ ನಡೆಸಿಕೊಡು ತ್ತಿದ್ದಾರೆ. ಈ ಸ್ನೇಹಬಳಗದ ಅಧ್ಯಕ್ಷರಾಗಿ ಅನುಯಾಯಿ ಗಳಿಗೆ, ಅಭಿಮಾನಿಗಳಿಗೆ ಮಾರ್ಗದರ್ಶನ ನೀಡುತ್ತಿರುವು ದಲ್ಲದೆ ಹಲವಾರು ಸಾಂಸ್ಕೃತಿಕ ಕ್ರೀಡಾ ಚಟುವಟಿಕೆಗಳನ್ನು ಸಹ ನಡೆಸಲು ನೆರವು ನೀಡುತ್ತಾ ವಾಯುವಿಹಾರಿಗಳ ಕಣ್ಮಣಿಯಾಗಿದ್ದಾರೆ.

ಇವರದು ಬಹುಶ್ರುತ ಸೇವೆ. ರಾಮಕೃಷ್ಣಮಠದೊಡನೆ ನಿಕಟಸಂಪರ್ಕ ಇರಿಸಿಕೊಂಡಿದ್ದಾರೆ. ಗಾಂಧಿಸಾಹಿತ್ಯ

ಸಂಘ, ಗಾಂಧಿಸ್ಮಾರಕ ನಿಧಿ; ವಿವೇಕಾನಂದ ಫೌಂಡೇಷನ್; ಭಾರತೀಯ ವಿದ್ಯಾಭವನ, ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್ ಮುಂತಾದವುಗಳ ಸಕ್ರಿಯ ಸದಸ್ಯರಾಗಿದ್ದಾರೆ.

ವಿಜ್ಞಾನಿಯಾಗಿ 'ಶೈತ್ರೀಕರಣ ಮತ್ತು ವಾಯು ನಿಯಂತ್ರಣ'ದ ಮೇಲೆ ಕೃತಿ ರಚಿಸಿದ್ದಾರೆ. ಗಾಂಧಿ ಭಕ್ತರಾಗಿ ಮಹಾತ್ಮಾ ಗಾಂಧಿ-125 (ಶಬ್ದ ಚಿತ್ರಗಳು) ಮಹಾತ್ಮ (ನೂರುಸವಿಗತೆಗಳು) 'ಮಹಾತ್ಮ ವಿಜ್ಞಾನ ಯುಗದ ಮಹಾಪ್ರಜ್ಞ' ರಚಿಸಿದ್ದಾರೆ. ಅಧ್ಯಾತ್ಮದಲ್ಲಿ ಆಸಕ್ತಿಯುಳ್ಳ ಇವರು ಶ್ರೀರಾಮಕೃಷ್ಣಗಾನಾಮೃತ, ಮಹಾರಾಷ್ಟ್ರದ ಸಂತರು, ಭಕ್ತಿಮಾಲಾ (ಇಂಗ್ಲಿಷ್‌ನಲ್ಲಿ) ರಚಿಸಿದ್ದಾರೆ.

ದೇಶೀಯ ಹಾಗೂ ಅಂತಾರಾಷ್ಟ್ರೀಯ ಪ್ರವಾಸ ಮಾಡಿರುವ ಇವರು ಪ್ರಾರ್ಥನಾಪ್ರವಾಸ (ಪ್ರವಾಸಕಥನ) ಸಹ ರಚಿಸಿದ್ದಾರೆ. ಭಕ್ತಿಸಂಗೀತದಲ್ಲಿ ಆಸಕ್ತಿ ಇರುವ ಇವರು ಹಲವಾರು ಭಕ್ತಿಗೀತೆಗಳನ್ನು ರಚಿಸಿ ತಾವೇ ಹಾಡಿದ್ದಾರೆ. ಕ್ಯಾಸೆಟ್, ಸಿ.ಡಿ. ರೂಪದಲ್ಲೂ ಇವನ್ನು ಪ್ರಕಟಿಸಿದ್ದಾರೆ. ಹಲವು ವರ್ಷ ಇವರು ವಿವೇಕಾನಂದ ಶೈಕ್ಷಣಿಕ ಸಂಸ್ಥೆಯ ಕಾರ್ಯದರ್ಶಿಯಾಗಿದ್ದು ಆನಂತರ ಅಧ್ಯಕ್ಷರಾಗಿ ಇದರ ಪುರೋಭಿವೃದ್ಧಿಗಾಗಿ ತಮ್ಮ ಗಳಿಕೆ ಯನ್ನೆಲ್ಲಾ ವಿನಿಯೋಗಿಸಿರುವುದಲ್ಲದೆ ಅಹರ್ನಿಶಿ ನಿಷ್ಕಲ್ಮಷ ಚಿತ್ತದಿಂದ ಇದಕ್ಕಾಗಿ ಶ್ರಮಿಸುತ್ತಿದ್ದಾರೆ. ಮಕ್ಕಳನ್ನು ಕಂಡರೆ ಅಪರಿಮಿತ ಪ್ರೀತಿ ಇರುವ ಇವರು ಮಕ್ಕಳ ಅಭ್ಯುದಯ ಕ್ಕಾಗಿ ಅನೇಕ ಯೋಜನೆಗಳನ್ನು ಕಾರ್ಯಗತಗೊಳಿಸುವಲ್ಲಿ ಮಗ್ನರಾಗಿದ್ದಾರೆ.

ಆದರ್ಶ ವ್ಯಕ್ತಿತ್ವದ, ಅನನ್ಯ ಚಿಂತನೆಯ ಅನೂಹ್ಯ ಸೇವಾನಿಷ್ಠ, ನಿಷ್ಕಾಮ ಕರ್ಮಯೋಗಿ, ಮಾಗಿರುವ ಮನಸ್ಸಿನ ಸಾಹಿತಿ, ಭಜನಾದುರಂಧರ. ಈ ಅನು ಕರಣೀಯ ವ್ಯಕ್ತಿ ಶತಕಾಲ ಬಾಳಲಿ. ಸೇವಾಕ್ಷೇತ್ರದಲ್ಲಿ ವಿಕ್ರಮ ಸಾಧಿಸಿ ಜಗದ್ವಿಖ್ಯಾತರಾಗಲಿ ಎಂದು ಹಾರ್ದಿಕ ವಾಗಿ ಆಶಿಸುತ್ತೇನೆ. 80ನೇ ಹುಟ್ಟುಹಬ್ಬದ ಸಂದರ್ಭದಲ್ಲಿ ಅವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತಾ, ಸಕಲ ಸನ್ಮಂಗಳೂ ಲಭಿಸಲಿ ಎಂದು ಶುಭಾಶಯ ಕೋರುತ್ತೇನೆ.



* * * * *

*ಶಕ್ತಿಯಿಲ್ಲದವರಿಗೆ ಇಲ್ಲಿ ಸ್ಥಳವಿಲ್ಲ – ಈ ಜನ್ಮದಲ್ಲೂ ಇಲ್ಲ, ಇನ್ನಾವುದೇ ಜನ್ಮದಲ್ಲೂ ಇಲ್ಲ! ದೌರ್ಬಲ್ಯವು ದಾಸ್ಯಕ್ಕೆ ದಾರಿ. ಶಾರೀರಿಕ-ಮಾನಸಿಕವಾದ ಎಲ್ಲ ಬಗೆಯ ದುಃಖಸಂಕಟಗಳಿಗೆ ನಮ್ಮನ್ನು ಈಡಾಗಿಸುವುದು ಈ ದೌರ್ಬಲ್ಯವೇ. ದೌರ್ಬಲ್ಯವು ಮರಣವಲ್ಲದೆ ಮತ್ತೇನು? ನಮ್ಮ ಸುತ್ತಮುತ್ತ ಮಿಲಿಯಗಟ್ಟಲೆ ರೋಗಾಣುಗಳು ಹರಡಿಕೊಂಡಿದ್ದರೂ ನಮ್ಮ ಶರೀರವು ದುರ್ಬಲವಾಗಿ ಅವುಗಳ ಆಕ್ರಮಣಕ್ಕೆ ಎಡೆಮಾಡಿಕೊಡದಿದ್ದರೆ ಅವು ನಮ್ಮನ್ನು ಏನೂ ಮಾಡಲಾರವು! ಹಾಗೆಯೇ, ದುಃಖ ಸಂಕಟ ಗಳೆಂಬ ರೋಗಾಣುಗಳು ಅಸಂಖ್ಯಾತವಾಗಿ ನಮ್ಮ ಸುತ್ತಮುತ್ತ ತುಂಬಿಕೊಂಡಿರಬಹುದು. ಆದರೇನಂತೆ? ನಮ್ಮ ಮನಸ್ಸೊಂದು ಸಶಕ್ತವಾಗಿದ್ದುಬಿಟ್ಟರೆ ಆ ದುಃಖ ಸಂಕಟಗಳು ನಮ್ಮನ್ನು ಕಾಡುವ ಮಾತಂತಿರಲಿ, ನಮ್ಮ ಹತ್ತಿರವೇ ಸುಳಿಯಲಾರವು. ಇದೊಂದು ದೊಡ್ಡ ಸತ್ಯ, ಏನೆಂದರೆ, ಶಕ್ತಿಯೇ ಜೀವನ, ದೌರ್ಬಲ್ಯವೇ ಮರಣ. ಶಕ್ತಿಯೇ ಆನಂದ, ಶಕ್ತಿಯೇ ಅಮೃತ, ಅದೊಂದೇ ಶಾಶ್ವತ. ದೌರ್ಬಲ್ಯದಿಂದ ನಿರಂತರ ಆಯಾಸ ಮತ್ತು ದುಃಖ; ದೌರ್ಬಲ್ಯವು ಮರಣವೇ!*

**- ಸ್ವಾಮಿ ವಿವೇಕಾನಂದ**

# ನಾ ಕಂಡ ಕಿಟ್ಟಿ

✍ ಡಾ|| ಹೊ. ಶ್ರೀನಿವಾಸಯ್ಯ

**1942-43**ರಲ್ಲಿ "ಭಾರತ ಬಿಟ್ಟು ತೊಲಗಿ" ಎಂದು ಗಾಂಧೀಜಿಯವರು ಬ್ರಿಟಿಷ್ ಆಡಳಿತಗಾರರಿಗೆ ಘೋಷಣೆ ನೀಡಿ, ಭಾರತದ ಸ್ವಾತಂತ್ರ್ಯಕ್ಕೆ ನಾಂದಿ ಹಾಡಿದರು. ಇದೇ ಕೊನೆಯ ಚಳುವಳಿ ಕಹಳೆಯ ಕೂಗು. ಆಗ ಯುವಕ ರಾಗಿದ್ದ ಕಾಲೇಜಿನಲ್ಲಿ ಓದುತ್ತಿದ್ದ ನಾವು, ಕಾಲೇಜುಗಳಿಗೆ ಮುಷ್ಕರ ಹೂಡಿ ಮೆರವಣಿಗೆ, ದಾರಿದೀಪಗಳಿಗೆ ಕಲ್ಲು ತೂರಾಟಗಳಿಂದ ಹೋರಾಟ ನಡೆಸುತ್ತಿದ್ದೆವು. ಆಗ ಸಿದ್ದವನಹಳ್ಳಿ ಕೃಷ್ಣಶರ್ಮ, ರಾಜರತ್ನಂರವರು ನಮ್ಮನ್ನೆಲ್ಲ ಗಾಂಧೀ ಜಯಂತಿ ಮುಂತಾದ ಕಾರ್ಯಕ್ರಮದಲ್ಲಿ ತೊಡಗಿಸಿ ಗಾಂಧೀಜಿಯವರ ರಚನಾತ್ಮಕದ ಕಡೆಗೆ ದಾರಿ ತೋರಿಸಿದರು. ಆಗ ಮಲ್ಲೇಶ್ವರದ ರಾಮಮಂದಿರದಲ್ಲಿ ಗಾಂಧೀ ಜಯಂತಿ ಮಾಡಲು ತೊಡಗಿದೆವು. ಆಗ ಸಮಾನ ವಯಸ್ಸಿನವರು, ಗಾಂಧೀಜಿಯವರು ಹಾಕಿದ ಮಾರ್ಗದಲ್ಲಿ ನಡೆಯಬೇಕೆಂಬ ಉತ್ಸಾಹ ಇದ್ದವರು ಈ ಕಾರ್ಯಕ್ರಮಗಳನ್ನು ಉತ್ಸಾಹದಿಂದ ನಡೆಸಿದರು. ಹೀಗೆ ಒಟ್ಟಿಗೆ ಬಂದವರಲ್ಲಿ ಶ್ರೀ ಎನ್. ಕೃಷ್ಣಸ್ವಾಮಿಯವರೂ ಒಬ್ಬರು. ನಾವು ಆತನನ್ನು ಕರೆಯುತ್ತಿದ್ದುದು ಕಿಟ್ಟಿ ಎಂದು. ಎಂ. ಎಸ್. ಕೃಷ್ಣಮೂರ್ತಿ ಮಿರಮಿರರವರನ್ನು ಎಂ. ಎಸ್.ಕೆ. ಎಂದು ಕರೆಯುವುದು ರೂಢಿ. ಕೃಷ್ಣಸ್ವಾಮಿ ಚೆನ್ನಾಗಿ ಹಾಡುತ್ತಿದ್ದರಿಂದ ಹಾಡಿನ ಕಿಟ್ಟಿ ಎಂದು ಕರೆಯಲು ಪ್ರಾರಂಭಿಸಿದೆವು.

ಮೊದಲಿನಿಂದಲೂ ಕಿಟ್ಟಿ, ಈಗ ಇರುವ ಹಾಗೆ ಸರಳ ಉಡುಪು. ಪೈಜಾಮ, ಬನಿಯನ್, ನಂತರ ಜುಬ್ಬ. ಗಾಂಧೀ ಜಯಂತಿಯಲ್ಲಿ ಭಜನೆ, ಪ್ರಾರ್ಥನೆ ಎಲ್ಲಾ ಅವನದೇ ಪಾಲು. ಅವನ ಸೋದರರಾದ ಚಂದ್ರ ಶೇಖರ್, ಸುಬ್ಬರಾವ್, ಲಕ್ಷ್ಮಣ ಎಲ್ಲರೂ ಎಲ್ಲಾ ಕಾರ್ಯ ಕ್ರಮದಲ್ಲೂ ಭಾಗವಹಿಸುತ್ತಿದ್ದರು. ಗಾಂಧೀ ಜಯಂತಿ ಯಲ್ಲಿ ಕಾಲೇಜಿನಿಂದ ಹಿಂದಿರುಗಿದ ಮೇಲೆ ಮನೆ ಮನೆಗೆ ಹೋಗಿ ಗಾಂಧೀ ಜಯಂತಿಗೆ ಹಣ ಶೇಖರಣೆ ಮಾಡು ತ್ತಿದ್ದೆವು. ಬೆಳಗಿನ ಜಾವ ಪ್ರಭಾತ್ ಭೇರಿ (ಮೆರವಣಿಗೆ ಹೊರಟರೆ, ಕಿಟ್ಟಿ, ಪಾಪು (ಸುಬ್ಬರಾವ್ ಎನ್.) ಇವರದೇ ಸಿಂಹಪಾಲು. ರಾಮಕೃಷ್ಣ ಆಶ್ರಮದ ಸಂಪರ್ಕದಿಂದ ಬೆಂಗಾಲೀ ಹಾಡುಗಳನ್ನು ಚೆನ್ನಾಗಿ ಹಾಡುತ್ತಿದ್ದರು.

ಗಾಂಧೀ ಜಯಂತಿಯಲ್ಲಿ ನೂಲುವ ಸ್ಪರ್ಧೆ ಇಟ್ಟಾಗ ಕಿಟ್ಟಿಗೆ ಬಹುಮಾನ ಬರುತ್ತಿತ್ತು. ಗಾಂಧೀ ಸಾಹಿತ್ಯ ಸಂಘದ ಪುಸ್ತಕ ಭಂಡಾರ, ಕಛೇರಿ ಮಲ್ಲೇಶ್ವರದ 6ನೇ ಕ್ರಾಸ್‌ನಲ್ಲಿ ನಮ್ಮ ಒಂದು ಸಣ್ಣ ಮನೆಯಲ್ಲಿ ಇತ್ತು. ಕೆಲವು ವರ್ಷ ಗಾಂಧೀ ಸಾಹಿತ್ಯ ಸಂಘದ ಕಾರ್ಯದರ್ಶಿಯೂ ಆಗಿದ್ದರು. ಆಗಿನಿಂದಲೂ ಈಗ ಇರುವ ಹಾಗೆ ಯಾವಾಗಲೂ ನಗು ಮುಖ, ಗಟ್ಟಿಯಾಗಿ ನಗುವುದೇ ಅವನಿಗೆ ರೂಢಿ. ಆಗಿನಿಂದಲೂ ಕೋಪ ಮಾಡಿದ್ದನ್ನೇ ನೋಡಲಿಲ್ಲ. ಸೀದಾ ಸಾದಾ ಮಾತು. ರಾಮಕೃಷ್ಣ ಆಶ್ರಮದ ಗೆಳೆಯರು ಕರೆಯುತ್ತಿದ್ದುದು. 'ಕಿಟ್ಟಿ ಮೇಷ್ಟ್ರು' ಎಂದು. ನಮಗೆ ಮಾತ್ರ ಹಾಡಿನ ಕಿಟ್ಟಿನೇ. ಹಾಡನ್ನು ಕೇಳುತ್ತಿದ್ದರೆ ಮೈ ಮರೆಯು ವಂತೆ ಆಗುತ್ತಿತ್ತು. ಪ್ರತಿ ಪೂರ್ಣಿಮೆ ರಾತ್ರಿ ಯಾರ ದಾದರೂ ಮನೆಯಲ್ಲಿ ಊಟ ಏರ್ಪಡಿಸಿ, ಮಿತ್ರಕೂಟ ಏರ್ಪಾಟು ಮಾಡುತ್ತಿದ್ದೆವು. ಅದರ ನಾಯಕತ್ವ ಪೂಜ್ಯ ಸಿದ್ದವನಹಳ್ಳಿ ಕೃಷ್ಣಶರ್ಮರವರದು. 3-4 ಗಂಟೆ ಕಾರ್ಯ ಕ್ರಮದಲ್ಲಿ ಕಿಟ್ಟಿದೇ ಪ್ರಧಾನ ಪಾತ್ರ. ಪಾಪು ಸೇವಾದಳ ಕಡೆ ಸೇರುವವರೆಗೂ ಇವರಿಬ್ಬರೂ ಹಾಡುವುದನ್ನು ಕೇಳು ವುದೇ ಒಂದು ಆನಂದ.

ಕಿಟ್ಟಿ ಎಲ್ಲದಕ್ಕೂ ಸಿದ್ದ. ನಾನು ಇಂಜಿನಿಯರಿಂಗ್ ಕಾಲೇಜಿನಲ್ಲಿ 3ನೇ ವರ್ಷ ಪಾಸಾದಾಗ ಎಲ್ಲರೂ ತಿಂಡಿ ಕೊಡಿಸು ಅಂದರು. ನನ್ನ ತಾಯಿ ಊರಿಗೆ ಹೋಗಿದ್ದರು. ನಮ್ಮ ಮನೆ ತೋಟದಲ್ಲಿ ತರಕಾರಿ ಬೆಳೆಯುತ್ತಿದ್ದೆವು. ಕಿಟ್ಟಿಗೆ ಹೇಳಿದೆ, "ತಿಂಡಿ ಕೊಡಿಸಲು ನನ್ನ ಹತ್ತಿರ ಹಣ ಇಲ್ಲ. ಮನೆಯಲ್ಲಿ ತಿಂಡಿ ಮಾಡಿಸೋಣ ಅಂದರೆ ಅಮ್ಮ ಊರಿನಲ್ಲಿ ಇಲ್ಲ" ಎಂದೆ. ಕಿಟ್ಟಿ "ಅದಕ್ಕೇನಂತೆ, ನಾನು ನೀನು ಸೇರಿ ನಿಮ್ಮ ಮನೆಯಲ್ಲೇ ಮಾಡೋಣ" ಎಂದು ಸೊಗಸಾಗಿ ತರಕಾರಿ ಖಾರಾಬಾತ್, ಸಿಹಿಪೊಂಗಲ್,

ಬಾದಾಮಿ ಹಾಲು ಇಬ್ಬರೂ ಸೇರಿ ಮಾಡಿದೆವು. 10-15 ಜನ ಸ್ನೇಹಿತರು ಸೇರಿದ್ದರು. ಎಲ್ಲರೂ ಸೊಗಸಾಗಿದೆ ಎಂದು ಹೊಗಳಿದರು.

ಆಗ ನಾವುಗಳು ಎಲ್ಲಿಗೆ ಹೋಗಬೇಕಾದರೂ ಕಾಲು ನಡುಗೆಯೇ, ನಮ್ಮಲ್ಲಿ ಯಾರಲ್ಲೂ ಸೈಕಲ್ ಸಹ ಇರಲಿಲ್ಲ. ಕಿಟ್ಟಿ ರಾಮಕೃಷ್ಣ ಆಶ್ರಮಕ್ಕೆ ಹೋಗಿಬರುತ್ತಿದ್ದ. 1949ರಲ್ಲಿ ಮಜುರಾ ಹೊಸಹಳ್ಳಿಯಲ್ಲಿ ಕರ್ನಾಟಕ ವಿದ್ಯಾರ್ಥಿ ಕಾಂಗ್ರೆಸ್ಸಿನಿಂದ ನಡೆಸಿದ ಶಿಬಿರದಲ್ಲಿ ರಸ್ತೆ ನಿರ್ಮಾಣ, ಭಜನೆ ಮತ್ತಿತರ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ಶಿಬಿರ ಯಶಸ್ವಿಯಾಗಿ ನಡೆಯಲು ಪ್ರಮುಖ ಪಾತ್ರ ವಹಿಸಿದ. ಕಾಂಗ್ರೆಸ್ ರಾಷ್ಟ್ರಾಧ್ಯಕ್ಷರಾದ ಪಟ್ಟಾಭಿ ಸೀತಾರಾಮಯ್ಯನವರಂತಹ ಅನೇಕರ ಪ್ರಶಂಸೆಗೆ ಪಾತ್ರರಾಗಿದ್ದೆವು.

ನಾನು ಗಾಂಧೀ ಸ್ಮಾರಕ ನಿಧಿಯ ಅಧ್ಯಕ್ಷನಾದ ಮೇಲೆ, ಅಗಿನ ಕಾರ್ಯದರ್ಶಿಗಳು ರಾಜೀನಾಮೆ ಕೊಟ್ಟ ಪ್ರಯುಕ್ತ ಕಿಟ್ಟಿಯನ್ನು ಕೇಳಿದ ಕೂಡಲೇ ಬಂದು ಕಾರ್ಯದರ್ಶಿಯ ಕೆಲಸದ ಜವಾಬ್ದಾರಿಯನ್ನು ತೆಗೆದುಕೊಂಡು ದೊಡ್ಡ ಉಪಕಾರ ಮಾಡಿದರು. ಆಗ ವಾಹನ ಭತ್ಯವನ್ನು ತೆಗೆದು ಕೊಳ್ಳದೆ ಒಂದು ದತ್ತಿಯನ್ನು ಸ್ಥಾಪಿಸಿ ಅಲ್ಲಿ ಕೆಲಸ ಮಾಡುವ ಕೆಲಸಗಾರರಿಗೆ ವರ್ಷಕ್ಕೆ ಒಂದು ಸಾರಿ ಉಡುಪುಗಳನ್ನು ಕೊಡಲು ಪ್ರಾರಂಭಿಸಲಾಯಿತು. ಅನೇಕ ಸಾರಿ ಅಮೇರಿಕಾಗೆ ಹೋಗಿ ಬಂದು 'ಪ್ರಾರ್ಥನಾ ಪ್ರವಾಸ' ಪುಸ್ತಕವನ್ನು ಬರೆದ. ನಾವು ಅಮೇರಿಕಾಗೆ ಹೋಗಿ ಡಾಲರ್ ಖರ್ಚು ಮಾಡಿದರೆ ಕಿಟ್ಟಿ ಅಲ್ಲಿ ಹಾಡು ಹಾಡಿ ಸಂಪಾದನೆ ಮಾಡಿ ಶಾಲೆ ಕಟ್ಟಿದ್ದಾರೆ. ಅನೇಕ ವೈಜ್ಞಾನಿಕ ಮತ್ತು ಗಾಂಧೀ, ವಿನೋಬಾ ಬಗ್ಗೆ ಪುಸ್ತಕಗಳನ್ನು ರಚಿಸಿದ್ದಾರೆ. ಭಜನೆ ಹಾಡುವವರ ಒಂದು ಗುಂಪನ್ನು ಕಟ್ಟಿದ್ದಾರೆ.

ಆಗಿನ ಕಾಲದಲ್ಲಿ ಗಾಂಧೀ ಸಾಹಿತ್ಯ ಸಂಘದಲ್ಲಿ ಶರ್ಮಾಜಿಯವರು ಕಟ್ಟಿದ ಯುವಕರ ಗುಂಪು ಉತ್ತಮ ಸ್ವಯಂ ಸೇವಕರಾಗಿ ದೇಶದ ನಾನಾ ಭಾಗಗಳಲ್ಲಿ ಸಮಾಜ ಸೇವೆಯನ್ನು ಮಾಡುತ್ತಿದ್ದಾರೆ. ಹಾಡಿನ ಕಿಟ್ಟಿ (ಕಿಟ್ಟಿ ಮೇಷ್ಟು) ಹೀಗೆ ಬೆಳೆದ ವ್ಯಕ್ತಿಗಳಲ್ಲಿ ಒಬ್ಬರು. ಈಗ 80 ವರ್ಷದ ಜನ್ಮದಿನೋತ್ಸವವನ್ನು ಆಚರಿಸಿ, ಸನ್ಮಾನಿಸುತ್ತಿರುವುದು ಜೊತೆಯಲ್ಲಿ ಕೆಲಸಮಾಡಿದ ನಮಗೆ ಬಹಳ ಆನಂದಕರ. ದೇವರು ಕಿಟ್ಟಿಗೆ ಆರೋಗ್ಯ, ಆಯಸ್ಸು, ಐಶ್ವರ್ಯಗಳನ್ನು ಕೊಟ್ಟು, ತೃಪ್ತಿಯನ್ನು ಮತ್ತು ಆನಂದಕರವಾದ ಜೀವನ ಕೊಡಲೆಂದು ದೇವರಲ್ಲಿ ಪ್ರಾರ್ಥನೆ.



* * * * *

---

ಮಣ್ಣೆಂದಿತು ಕುಂಬಾರಗೆ
"ಏತಕೆ ತುಳಿಯುವೆ ನನ್ನ?
ಮುಂದೊಂದು ದಿನ ಬರಲಿಹುದು
ಆಗ ನಾ ತುಳಿವೆನು ನಿನ್ನ" — ಕಬೀರಾ॥

ಓ ಮನವೇ, ತಡೆ, ಸಾವಧಾನ
ಮೆಲ್ಲಮೆಲ್ಲನೆ ಎಲ್ಲ।
ನೂರು ಬಿಂದಿಗೆ ನೀರು ಸುರಿದರೂ
ಋತು ಬಾರದೆ ಫಲವಿಲ್ಲ — ಕಬೀರಾ॥

ಮಾಡುವುದನೆಲ್ಲ ಮಾಡಿದ ಮೇಲೆ
ಈಗೇತಕೆ ಪರಿತಾಪ?
ಬೇವಿನ ಮರವನು ಬೆಳೆಸಿದ ನಿನಗೆ
ಮಾವು ದೊರಕುವುದೆ? — ಕಬೀರಾ॥

ಕೋಪ-ತಾಪ ಕಳೆದಿಹ ಮನಕೆ
ವೈರಿಗಳಾರೂ ಇಲ್ಲ।
ಕೋಪವ ತ್ಯಜಿಸಿ ಕರುಣೆಯ ಹರಿಸೆ
ಲೋಕದಿ ಮಿತ್ರರೆ ಎಲ್ಲ — ಕಬೀರಾ॥

(ಸ್ವಾಮಿ ಪುರುಷೋತ್ತಮಾನಂದಜಿಯವರ **'ಕಬೀರ ಬೀರಿದ ಬೆಳಕು'** ಪುಸ್ತಕದಿಂದ)

# 'ನಮ್ಮ ಕಿಟ್ಟಿ'

✍ ನೀಲತ್ತಹಳ್ಳಿ ಕಸ್ತೂರಿ

**1947,** ನಮ್ಮ ನಾಡಿಗೆ ಸ್ವಾತಂತ್ರ್ಯ ಬಂದ ವರ್ಷ. ಆಗಲೇ ನಾನು ಹಿಂದೂಸ್ತಾನಿ ಸೇವಾದಳ ಸೇರಿದ್ದು. ಮಲ್ಲೇಶ್ವರದಲ್ಲಿ ಹಲವು ಶಾಖೆ ನಡೆಯುತ್ತಿದ್ದವು. ಆರ್.ಎಸ್.ಎಸ್. ಶಾಖೆಗಳೂ ಇದ್ದವು. ಎಷ್ಟೋ ಸಲ ಎರಡಕ್ಕೂ ಪೈಪೋಟಿ. ಒಮ್ಮೊಮ್ಮೆ ತಿಕ್ಕಾಟ ಸಹ. ನನ್ನನ್ನು ಆರ್. ಎಸ್.ಎಸ್.ಗೆ ಕರೆದೊಯ್ಯಲು ಪ್ರಯತ್ನ ಆದವು. ಅದರ ಯುವಉತ್ಸಾಹಿಗಳು ಬೇಕಾದಷ್ಟು ಗಾಳ ಹಾಕಿದರು. ಒಂದು ದಿನ ಅಲ್ಲಿಗೆ ಹೋಗಿಯೂ ಹೋದೆ. 'ನಮಸ್ತೇ ವತ್ಸಲೇ ಮಾತೃಭೂಮೇ' ಹೇಳಿದೆ. ಎರಡು ಮೂರು ದಿನ ಹೋದೆ. ಏಕೋ ಏನೊ ಮನಸ್ಸು ಮುಂದುವರಿಯಲು ಒಪ್ಪಲಿಲ್ಲ. ಆಗ ಆರ್.ಎಸ್.ಎಸ್. ಹಿಂದೂ ಕೋಮುವಾದಿ ಸಂಘಟನೆ ಎಂಬುದು ನನಗೇನೂ ಗೊತ್ತಿರಲಿಲ್ಲ. ಅದೆಲ್ಲ ಸೂಕ್ಷ್ಮ ಅರ್ಥವೂ ಆಗುತ್ತಿರಲಿಲ್ಲ. ಮನೆಯಲ್ಲಿನ ವಾತಾವರಣವೊ ಏನೊ! ನಮ್ಮಣ್ಣ ರಂಗಾಚಾರ್ ಆ ವೇಳೆಗೇ ಸೇವಾದಳ, ರಾಷ್ಟ್ರೀಯತೆ, ಖಾದಿ, ಗಾಂಧಿ ಇತ್ಯಾದಿ ಮಾತಾಡುತ್ತಿದ್ದುದೊ ಏನೊ, ನನಗೂ ಅತ್ತ ಮನಸ್ಸು ಹೋಯಿತೇ ವಿನಾ, ಆರ್.ಎಸ್.ಎಸ್.ನತ್ತ ಒಲವು ಮೂಡಲಿಲ್ಲ.

1948 ಜನವರಿ 30 ಗಾಂಧೀಜಿಯ ಹತ್ಯೆ ಆಯಿತು. ಆ ದುಷ್ಕೃತ್ಯ ಮಾಡಿದ ಗೋಡ್ಸೆ ಆರ್.ಎಸ್.ಎಸ್.ನಲ್ಲಿ ಇದ್ದವ ಎಂದು ಪತ್ರಿಕೆಗಳಲ್ಲಿ ಬಂತು. ಮೇಲಾಗಿ ಆ ದಿನ ಮಲ್ಲೇಶ್ವರದಲ್ಲಿ ಕೆಲವು ಆರ್.ಎಸ್.ಎಸ್. ಯುವಕರು ಸಿಹಿ ಹಂಚಿದ್ದು, ಗಾಂಧೀಜಿ ಸತ್ತದ್ದಕ್ಕೆ ಸಂತೋಷಿಸಿದ್ದು ನೋಡಿದಮೇಲಂತೂ, ನನ್ನ ಭಾವನೆ ಬೇರೆಯೆ ಆಯಿತು. ಆರ್.ಎಸ್.ಎಸ್.ನಿಂದ ದೂರವೇ ಆಯಿತು.

ಅದೇ ಸುಮಾರಿಗೆ ಮಲ್ಲೇಶ್ವರದ ಸರ್ಕಾರಿ ಪ್ರೌಢಶಾಲೆಯಲ್ಲಿ ಒಂದು ತಿಂಗಳ ಸೇವಾದಳ ಶಿಕ್ಷಣ ಶಿಬಿರ ನಡೆಯಿತು. ಪ್ರತಿದಿನ ರಾತ್ರಿ ಶಿಬಿರ, ಮುಂಜಾನೆ ಕವಾಯತು, ವ್ಯಾಯಾಮ, ಧ್ವಜವಂದನೆ ಇತ್ಯಾದಿ. ರಾತ್ರಿ ಬೌದ್ಧಿಕ ಕಾರ್ಯಕ್ರಮ, ಪ್ರವಚನ, ಹಾಡು ಇತ್ಯಾದಿ. ಆಗಲೇ ಸಿದ್ದವನಹಳ್ಳಿ ಕೃಷ್ಣಶರ್ಮಾಜಿಯವರ ನಿಕಟ ಸಂಪರ್ಕ ದೊರೆತದ್ದು. ಅವರ ಪ್ರವಚನಗಳು ನನ್ನಲ್ಲಿದ್ದ ರಾಷ್ಟ್ರೀಯ ಭಾವನೆಗೆ ನೀರು ಗೊಬ್ಬರ ಎರೆದು ದೃಢಗೊಳಿಸಿದವು. ಅವರ ವ್ಯಕ್ತಿತ್ವ, ಆ ಸರಳತೆ, ಸೌಜನ್ಯ, ಸೌಶೀಲ್ಯ, ಸೌಲಭ್ಯ ನಮ್ಮನ್ನೆಲ್ಲ ಸೂಜಿಗಲ್ಲಿನಂತೆ ಸೆಳೆದವು. ಅವರೇ ನಮ್ಮ ಪಾಲಿಗೆ ಗಾಂಧಿ — ಜೀವಂತ ಗಾಂಧಿ! ಅದೇ ಸಂಬಂಧ ಅವರು ಬದುಕಿರುವವರೆಗೂ ಸಾಗಿತು. 1973ರಲ್ಲಿ ಅವರು ನಮ್ಮನ್ನು ಅಗಲಿದ ನಂತರವೂ, ಇಂದಿನವರೆಗೂ ಆ ಸಂಬಂಧ ಮಾನಸಿಕವಾಗಿ ಉಳಿದೇ ಇದೆ.

ಸೇವಾದಳ ಶಿಬಿರದಲ್ಲಿ ಭಜನೆಗಳು, ರಾಷ್ಟ್ರೀಯ ಗೀತೆಗಳು ಎಲ್ಲಾ ನಡೆಯುತ್ತಿದ್ದವು. ಅನೇಕ ಗೀತೆಗಳನ್ನು ಹಾಡುತ್ತಿದ್ದೆವು. ದೇವೀ ಭುವನ ಮನಮೋಹಿನಿ, ಚಯಲೀಸಕಾ ನಯಾ ಜಮಾನಾ ಭಾರತ ಖೇಲೀ ಹೋಲಿ, ಹೆಜ್ಜೆ ಹೆಜ್ಜೆ ಹೆಜ್ಜೆ ಮುಂದೆ, ಸರಸರ ಕಿರಂಗಿ ಝುಂಡಾ, ಝುಂಡಾ ಊಂಛಾ ರಹೇ ಹಮಾರ, ಚಲೋ ದಿಲ್ಲಿ, ಕದಂ ಕದಂ ಬಢಾಯೆ ಜಾ ಇತ್ಯಾದಿ ಎಷ್ಟೋ ಹಾಡುಗಳು ಮೈ ಜುಮುಕಟ್ಟಿಸುತ್ತಿದ್ದವು. ಅವನ್ನೆಲ್ಲ ನಮಗೆ ಕಲಿಸುತ್ತಿದ್ದವರು ಎಸ್. ಎನ್. ಸುಬ್ಬರಾವ್ (ಪಾಪು) ಹಾಗೂ ಕಿಟ್ಟಿ. ನಮ್ಮ ತಂಡ ಸೇವಾದಳ ಕವಾಯತಿಗಳಲ್ಲಿ ತುಂಬ ಪ್ರಶಂಸೆಗೂ ಪಾತ್ರವಾಗಿತ್ತು.

1948, ಜನವರಿ 30 ಶುಕ್ರವಾರ ಸಂಜೆ ಸುಮಾರು 5 ಗಂಟೆ ಸಮಯ. ಮಲ್ಲೇಶ್ವರದ ಎಂಟನೆಯ ಕ್ರಾಸ್‌ನಲ್ಲಿ ಗುಟ್ಟಹಳ್ಳಿ ದಾರಿಯ ಮೈದಾನದಲ್ಲಿ ನಾವು ಸೇವಾದಳ ಶಾಖೆ ನಡೆಸುತ್ತಿದ್ದೆವು. ಚಿದಂಬರ ನಮ್ಮ ನಾಯಕ. ಆತ ಕನ್ನಡ ವಿದ್ವಾಂಸ, ಲೇಖಕ ವೆಂಕಣ್ಣಯ್ಯನವರ ಮಗ. ಇನ್ನೇನು ನಾವು ತ್ರಿವರ್ಣಧ್ವಜ ಹಾರಿಸಬೇಕು. ಆಗ ಆತ ಓಡುತ್ತ ಬಂದು, ಏದುಸಿರುಬಿಡುತ್ತಿದ್ದ, "ಶಾಖೆ ನಿಲ್ಲಿಸಿ, ಗಾಂಧೀಜಿ ಸತ್ತುಹೋದರು" ಎಂದು ಅಳುತ್ತ ಹೇಳಿದ. ಒಡನೆಯೆ ನಾವು ಶಾಖೆ ನಿಲ್ಲಿಸಿದೆವು. ಆಗ ಆರನೆಯ ಕ್ರಾಸ್‌ನಲ್ಲಿ ಹೊ. ಶ್ರೀನಿವಾಸಯ್ಯನವರ ಮನೆಯಲ್ಲಿ ಇದ್ದ

ಗಾಂಧೀ ಸಾಹಿತ್ಯ ಸಂಘಕ್ಕೆ ಓಡಿದೆವು. ಆಗಲೇ ಅಲ್ಲಿ ಕೆಲವು ತರುಣರು ಸೇರಿದ್ದರು. ಆಗ ಗಾಂಧೀ ಸಾಹಿತ್ಯ ಸಂಘ ತರುಣರ ಸೂಜಿಗಲ್ಲಾಗಿತ್ತು. ಮೌನ ಮೆರವಣಿಗೆ, ಪ್ರಾರ್ಥನೆ ಎಲ್ಲ ನಡೆದವು. ಅಂದಿನಿಂದ ಹನ್ನೆರಡು ದಿನವೂ ಸಂಜೆ ಪಕ್ಕದ ಆಟದ ಮೈದಾನದಲ್ಲಿ ಪ್ರಾರ್ಥನಾ ಸಭೆ. ಮುಂದೆ ಒಂದು ವರ್ಷ ಪೂರ್ತಿ ಪ್ರತಿ ಶುಕ್ರವಾರ ಸಂಜೆ ಪ್ರಾರ್ಥನಾ ಸಭೆ. ಕಿಟ್ಟಿಯೆ ಮುಂದಾಳು. ಗೀತೆ, ಉಪನಿಷತ್ತಿನ ಶ್ಲೋಕಗಳು, ಭಜನ ಗೀತೆಗಳು, ಕನ್ನಡ ಹಿಂದಿ, ಮರಾಠಿ, ಗುಜರಾತಿ ಹಾಡುಗಳು. ಹಾಡುಗಳಿಂದ ಕಿಟ್ಟಿ ನಮ್ಮನ್ನು ಗೆದ್ದುಬಿಟ್ಟರು.

ಆಗ ಒಂದು ದಿನ ಸಂಜೆ ನಾನು ಗಾಂಧೀ ಸಾಹಿತ್ಯ ಸಂಘಕ್ಕೆ ಹೋದೆ. ನನ್ನ ಹಾಗೆಯೆ ಅನೇಕ ಹುಡುಗರು ಹೋಗುತ್ತಿದ್ದರು. ಪ್ರಾಯಶಃ 1948-1960ರ ಸುಮಾರಿನಲ್ಲಿ ಸಂಘದ ಸಂಪರ್ಕಕ್ಕೆ ಬಾರದ ಯುವಕರೇ ಮಲ್ಲೇಶ್ವರದಲ್ಲಿ ಇರಲಿಲ್ಲವೊ ಏನೊ! ಅಲ್ಲಿ ಹಾಡಿನ ಕಿಟ್ಟಿ ಇದ್ದರು. ನಗೆಮೊಗದ ಸ್ವಾಗತ, ಪ್ರೀತಿಯ ಮಾತು, "ಏನಯ್ಯ, ನಿನಗೆ ಸೈಕಲ್ ಬರುತ್ತಾ?" ಎಂದು ಕೇಳಿದರು. "ಬರುತ್ತೆ." "ಹಾಗಾದರೆ ಬಾ, ಈ ತುತ್ತೂರಿ ತಗೋ, ನನ್ನ ಜೊತೇಲಿ ಬಾ. ಸೈಕಲ್‌ನಲ್ಲಿ ಹೋಗೋಣ, ಕಾರ್ಯಕ್ರಮದ ಪ್ರಕಟಣೆ ಮಾಡೋಣ" ಎಂದರು. ಇಬ್ಬರೂ ಸೈಕಲ್ಲುಗಳನ್ನು ಏರಿ ಹೊರಟೆವು. ಕೈಯಲ್ಲಿ ತಗಡಿನ ತುತ್ತೂರಿ, "ಈ ದಿನ ಸಂಜೆ ಆರು ಗಂಟೆಗೆ ಮಲ್ಲೇಶ್ವರದ ಆಟದ ಮೈದಾನದಲ್ಲಿ ಪ್ರಾರ್ಥನಾ ಸಭೆ" ಎಂದು ಕೂಗುತ್ತ ಮಲ್ಲೇಶ್ವರದ ಸಂಪಿಗೆ ರಸ್ತೆ, ಮಾರ್ಗೋಸಾ ರಸ್ತೆ ಅಲೆದೆವು. ನಾನಿನ್ನೂ ಚಿಕ್ಕವ, ಒಂದು ಕೈಯಲ್ಲಿ ಸೈಕಲ್, ಒಂದು ಕೈಯಲ್ಲಿ ತುತ್ತೂರಿ ಹಿಡಿದು ತಟ್ಟಾಡುತ್ತ ಹೇಗೊ ನಿಭಾಯಿಸಿದೆ. ಅದು ನಮ್ಮ ಆಗಿನ ಪ್ರಚಾರ ವೈಖರಿ.

ಕಿಟ್ಟಿಗೆ ಶ್ರೀರಾಮಕೃಷ್ಣ ಮಠದಲ್ಲಿ initiation ಆಗಿತ್ತು. ನನಗೆ ಸಂಘದಲ್ಲಿ ಇದೇ initiation. ಮುಂದೆ ಸಂಘದ ಕೆಲಸದಲ್ಲಿ ನಾನು ಪೂರಾ ಮುಳುಗಿಹೋದೆ.

ಗಾಂಧೀ ಸಾಹಿತ್ಯ ಸಂಘ ಆಗ ಎರಡು ಝರಿಗಳ ಸಂಗಮ. ಒಂದು ರಾಷ್ಟ್ರೀಯತೆ, ಗಾಂಧೀ ವಿಚಾರಗಳ ಝರಿ. ಶರ್ಮಾಜಿ, ಹೊ. ಶ್ರೀನಿವಾಸಯ್ಯ, ಮಿರಮೀರಾ ಕೃಷ್ಣಮೂರ್ತಿ ಇತ್ಯಾದಿ. ಇನ್ನೊಂದು ಶ್ರೀರಾಮಕೃಷ್ಣ-ವಿವೇಕಾನಂದ ಪ್ರೇರಿತ ಝರಿ. ಎಸ್. ಎನ್. ಚಂದ್ರಶೇಖರ್ (ಚಂದ್ರು), ಕಿಟ್ಟಿ ಇವರೆಲ್ಲ. ಇಂದು ಬೆಂಗಳೂರಿನ ಪೂಜ್ಯ ಸ್ವಾಮಿಗಳಾಗಿರುವ ಸ್ವಾಮಿ ಹರ್ಷಾನಂದ, ಸ್ವಾಮಿ ಗೌತಮಾನಂದ ಅವರುಗಳೂ ಇದ್ದರು. ಎರಡೂ ಝರಿಗಳ ಮಿಲನವೇ ಸಂಘ. ಒಂದು ಕಡೆ ಮಹಾತ್ಮ ಗಾಂಧಿ, ಇನ್ನೊಂದು ಕಡೆ ಸ್ವಾಮಿ ವಿವೇಕಾನಂದ – ಭಾರತದ ಎರಡು ಮಹಾನ್ ಚೇತನಗಳು. ಒಬ್ಬರು ಇನ್ನೊಬ್ಬರಿಗೆ ಪೂರಕ. ಇಬ್ಬರ ವಿಚಾರಸಂಗಮವೇ ಭಾರತ ನವೋದಯದ ಎರಡು ದೀಪಸ್ತಂಭಗಳು. ಆ ಎರಡು ಚೇತನಗಳು, ಎರಡು ವಿಚಾರಗಳು ಒಂದುಗೂಡಿ ಈ ದೇಶವನ್ನು ಮುನ್ನಡೆಸಬೇಕು. ಸಂಘದಲ್ಲಿ ನಡೆದದ್ದು ಅಂಥ ವಿಚಾರಸಂಗಮ. ಅದೇ ಸಂಘವನ್ನು ಮುನ್ನಡೆಸಿತು. ಸಂಘದ ಗೆಳೆಯರ ಬದುಕನ್ನು ರೂಪಿಸಿತು. ನಮ್ಮ ದೇಶಕ್ಕೂ ಇಂಥದೇ ದ್ವಯಮಂತ್ರ ಅಗತ್ಯ. ಶ್ರೀವೈಷ್ಣವರಲ್ಲಿ ದ್ವಯಮಂತ್ರ (ಎರಡು ಮಂತ್ರಗಳು) ತುಂಬ ಪ್ರಧಾನ ಉಪಾಸ್ಯ ಮಂತ್ರ. 'ಶ್ರೀಮನ್ನಾರಾಯಣ ಚರಣಂ ಶರಣಂ ಪ್ರಪದ್ಯೇ, ಶ್ರೀಮತೇ ನಾರಾಯಣಾಯ ನಮಃ' – ಇದು ದ್ವಯಮಂತ್ರ. ವಿವೇಕಾನಂದ-ಗಾಂಧೀಜಿ ಭಾರತದ ದ್ವಯಮಂತ್ರವಾಗಬೇಕು. ಆಗಲೇ ನವೋದಯ!

ಸೈಕಲ್-ತುತ್ತೂರಿಯಿಂದ ಆರಂಭವಾದ ನನ್ನ-ಕಿಟ್ಟಿಯವರ ಸಂಬಂಧ, ಒಡನಾಟ, ಮೈತ್ರಿ ಒಂದು ರೀತಿಯಲ್ಲಿ ಗುರು-ಶಿಷ್ಯ ಸಂಬಂಧ, ಸಖ್ಯಯೋಗ. ಇಷ್ಟುಕಾಲವೂ ಅಖಂಡವಾಗಿ ಬೆಳೆದುಬಂದಿದೆ.

ಕಿಟ್ಟಿ ಮುಂದೆ ಬೆಂಗಳೂರು ಬಿಟ್ಟು ಕೆಲಸದ ನಿಮಿತ್ತ ಬೇರೆ ಬೇರೆ ಕಡೆ ಹೋದರು. ನಿವೃತ್ತರಾಗಿ ಇಲ್ಲಿಗೇ ಬಂದು ನೆಲೆಸಿದರು. ಯಥಾಪ್ರಕಾರ ಭಜನೆ, ಜೊತೆಗೆ ಸೇವೆ, ಶಾಲೆಯ ನಿರ್ಮಾಣ. ಅವರ ಗೈರುಹಾಜರಿಯಲ್ಲಿ ನಾವೇ ಹೇಗೊ ಭಜನೆ ಮುಂದುವರಿಸಿದೆವು. ಕೊನೆಗೆ ತಿಂಗಳಿಗೆ ಒಂದು ದಿನವಾದರೂ ಸೇರಬೇಕು ಎಂದು ಪ್ರತಿತಿಂಗಳ ಮೊದಲ ಶುಕ್ರವಾರ ಸೇರಲು ತೊಡಗಿದೆವು. ದೂರದ ಗವಿಪುರದಿಂದ ಕಿಟ್ಟಿ ತಪ್ಪದೆ ಬಂದು

ನಡೆಸುತ್ತಿದ್ದರು. ಅದಕ್ಕಾಗಿಯೆ ಮದರಾಸಿನಿಂದ ಒಂದು ಹೊಸ ಹಾರ್ಮೋನಿಯಂ ಖರೀದಿಸಿ ತಂದುಕೊಟ್ಟರು. ತಬಲವೂ ಬಂತು. ಅವರ ತಮ್ಮ ಗಣೇಶ್ ಆಗಾಗ ಬಂದು ಸಾಥಿ ನುಡಿಸುತ್ತಿದ್ದರು. ಕಿಟ್ಟಿ ಭಜನಾವಳಿಗಳನ್ನು ರೂಪಿಸಿ ಕೊಟ್ಟರು. ಈಚೆಗೆ ನಾಲ್ಕೈದು ವರ್ಷಗಳಿಂದ ಕಿಟ್ಟಿ ಬರುತ್ತಿಲ್ಲ. ಅಪಘಾತಗಳಿಂದ ಕಾಲಿಗೆ ಆದ ತೊಂದರೆ, ವಯೋಧರ್ಮಗಳಿಂದಾಗಿ ಬರುತ್ತಿಲ್ಲ. ನಾವೇನೊ ಒಬ್ಬರು ಬರಲಿ, ಇಬ್ಬರು ಇರಲಿ ಶುಕ್ರವಾರದ ಭಜನೆ ಮುಂದು ವರಿಸಿದ್ದೇವೆ. ಏನಾದರೂ ಕಿಟ್ಟಿ ಇದ್ದರೇ ಸೊಗಸು. ಅವರ ಭಜನೆ ಕೇಳುತ್ತಿದ್ದರೆ ಪಂಕಜ್‌ಮಲ್ಲಿಕ್ ನೆನಪಾಗುತ್ತಾರೆ. ಆ ಕಂಠ, ಆ ತನ್ಮಯತೆ, ಆ ಭಾವುಕತೆ, ಆ ಪ್ರೀತಿ — ಕಿಟ್ಟಿಗೆ ಮಾತ್ರ ಸಾಧ್ಯ.

ಕಿಟ್ಟಿ ಅಮೆರಿಕಾ ಪ್ರವಾಸಮಾಡಿ ಬಂದರು. ಅಲ್ಲೂ ಭಜನೆಯೇ! ಅಮೆರಿಕಾಗೆ ಹೋಗುವವರು ಲೆಕ್ಕವಿಲ್ಲದಷ್ಟು ಮಂದಿ. ಎಲ್ಲರ ಅನುಭವ ಒಂದು ರೀತಿಯದಾದರೆ, ಕಿಟ್ಟಿಯಂಥವರ ಅನುಭವ ಬೇರೆ. ಅದನ್ನೆಲ್ಲ ಒಮ್ಮೆ ಹೇಳಿದರು. ನಾನು ಹೇಳಿದೆ, "ಕಿಟ್ಟಿ, ಇದನ್ನೆಲ್ಲ ಬರೆದು ಇಡಿ, ದಾಖಲೆ ಇರಲಿ" ಎಂದು. "ಯಾರಯ್ಯ ಪ್ರಕಟಿಸ್ತಾರೆ?" ಎಂದರು. ನೀವು ಬರೆಯಿರಿ ನೋಡೋಣ ಎಂದು ತಗಾದೆ ಮಾಡಿದೆ. ಎಂಟೇ ದಿವಸ ಆಗಿಲ್ಲ, ಒಂದು ಬೆಳಗ್ಗೆ ಸ್ಕೂಟರ್‌ನಲ್ಲಿ ಮನೆಗೆ ಹಾಜರು ಕಿಟ್ಟಿ. "ನೋಡಯ್ಯ, ಬರೆದಿದೀನಿ, ನೀನು ಹೇಳಿದಂತೆ. ಏನು ಮಾಡ್ತೀಯೋ ಮಾಡಿಕೊ" ಎಂದು ಹಸ್ತಪ್ರತಿ ಕೊಟ್ಟರು. ಎಂಟೇ ದಿನದಲ್ಲಿ ಸುಮಾರು ಮುನ್ನೂರು ಪುಟ ರಚನೆ! ನನಗಂತೂ ಸಾಧ್ಯವಿಲ್ಲ! ಆಗ 'ಕನ್ನಡಪ್ರಭ'ದ ಸಂಪಾದಕರು ನಮ್ಮ ಸರ್ವೋದಯ ಬಳಗದ ಖಾದ್ರಿಶಾಮಣ್ಣ. ಹಸ್ತಪ್ರತಿ ಹೊತ್ತು ಅವರಲ್ಲಿಗೆ ಹೋಗಿ ಕೊಟ್ಟೆ. "ಧಾರಾಳವಾಗಿ ಹಾಕೋಣ, ಒಂದು ಫೋಟೊ ತಂದುಕೊಡು. ಹಾಗೆಯೇ ಹೆಸರು ತಿಳಿಸು" ಎಂದರು. ಆಯಿತು ಕೆಲಸ ಎಂದುಕೊಂಡೆ. ಚಕ್ ಅಂತ ಒಂದು ಹೆಸರು ಹೊಳೆಯಿತು. " 'ಪ್ರಾರ್ಥನಾ ಪ್ರವಾಸ' ಎನ್ನೋಣವೇ?" ಎಂದೆ. "ಓ ಭೇಷಾಯಿತು" ಎಂದರು ಶಾಮಣ್ಣ. ಆಮೇಲೆ ಕಿಟ್ಟಿಗೆ ಹೇಳಿದೆ. ಬಾಯಿತುಂಬ ನಕ್ಕು ಭೇಷ್ ಎಂದರು. ಲೇಖನ ಪತ್ರಿಕೆಯಲ್ಲಿ ಧಾರಾವಾಹಿ ಯಾಗಿ ಬಂತು. ವಿಶಿಷ್ಟ ಅನುಭವದ ವಿಶಿಷ್ಟ ನಿರೂಪಣೆ. ಆನಂತರ ಅದನ್ನೇ ಪುಸ್ತಕವಾಗಿಯೂ ಪ್ರಕಟಿಸಿದರು. ಅದರ ಹಣವನ್ನು ಶಾಲೆಗೆ ಕೊಟ್ಟರು.

ಕಿಟ್ಟಿಗೆ 60 ತುಂಬಿದಾಗಲೂ ಸಮಾರಂಭ ನಡೆಯಿತು. ಭಾರಿ ಜನ, ನಮಗೆಲ್ಲ ಸುಗ್ರಾಸ ಭೋಜನ, ಬಂದ ಕಾಣಿಕೆ-ಉಡುಗೊರೆ ಎಲ್ಲ ವಿವೇಕಾನಂದ ಶಾಲೆಗೆ.

ವಿದ್ಯಾಭವನದ 'ಗಾಂಧೀ ಕೃತಿಸಂಚಯ' ಅನುವಾದ ಯೋಜನೆಯಲ್ಲಿ ಕಿಟ್ಟಿ ನಮ್ಮೊಡನೆ ಕೆಲಸ ಮಾಡಿದ್ದಾರೆ. 'ಗಾಂಧೀ - 100', 'ವಿನೋಬಾ' ಇತ್ಯಾದಿ ಪುಸ್ತಕ ರಚಿಸಿದ್ದಾರೆ. ಎಲ್ಲವೂ ಸೇವೆಯೆ. ಕಿಟ್ಟಿಯ ಬದುಕೇ ಸೇವಾಮಯ. "ಕಾಷಾಯವನುಡದಿಹ ಯತಿ" ಎಂದಿದ್ದಾರೆ ಡಿವಿಜಿ ಶ್ರೀರಾಮನ ಬಗ್ಗೆ. ಕಿಟ್ಟಿಯೂ ಯತಿಯೇ, ಬಿಳೀ ಬಟ್ಟೆಯ — ಖಾದಿ ಬಟ್ಟೆಯ ಯತಿ, ಅಖಂಡ ಬ್ರಹ್ಮಚಾರಿ, ಬ್ರಹ್ಮಸಂಚಾರಿ!

"ಮಾನಸಸಂಚರರೇ ಬ್ರಹ್ಮಣಿ ಮಾನಸಸಂಚರರೇ" ಎಂಬುದು ಸದಾಶಿವ ಬ್ರಹ್ಮೇಂದ್ರರ ಒಂದು ಹಾಡು. ಕಿಟ್ಟಿಯೂ ಇದನ್ನು ಹಾಡುತ್ತಾರೆ. ಕಿಟ್ಟಿಯವರ ಮನಸ್ಸು; ಮನಸ್ಸೇಕೆ, ಮನಸ್ಸು ದೇಹ ಆತ್ಮ ಎಲ್ಲವೂ ಬ್ರಹ್ಮನಲ್ಲೆ ಸಂಚರಿಸುತ್ತದೆ.

ನಮಗೆಲ್ಲ ಬೇಡಬೇಡ ಎಂದರೂ ವಯಸ್ಸು ಕವಿಯುತ್ತ ಬಂದಿದೆ. ದೇವರೇ, ಕಿಟ್ಟಿಯಂಥ ಸಾಧುಜೀವಿಯ ನಿಷ್ಕಲ್ಮಷ ನಗೆಮುಗುಳು ನಾವಿರುವಷ್ಟು ದಿನವೂ ನಮಗೆ ದೊರಕುತ್ತಿರಲಿ ಎಂದು ಬಯಸಿದರೆ ಸ್ವಾರ್ಥವೇನೂ ಆಗಲಾರದಲ್ಲವೇ!

ನನ್ನ ಈ ಆಶಯಕ್ಕೆ ನಾನೇ "ತಥಾಸ್ತು" ಎಂದು ಬಿಡುತ್ತೇನೆ. ನಂ ಕೃಷ್ಣಸ್ವಾಮಿ, ನಮ್ಮ ಕೃಷ್ಣಸ್ವಾಮಿ ನೂರು ಕಾಲ ನಲ್ಮೆಯಿಂದ ಬಾಳಬೇಕು, ನಲಿವನ್ನು ಚೆಲ್ಲಬೇಕು.



* * * * *

# ನಾನು ಕಂಡ ಎನ್. ಕೆ.

**ಡಾ. ಹೆಚ್. ಕೆ. ನಾಗರಾಜ,** ನಿವೃತ್ತ ಹಿರಿಯ ನೇತ್ರ ತಜ್ಞರು, ಮಿಂಟೋ ಕಣ್ಣಾಸ್ಪತ್ರೆ
ಕಾರ್ಯದರ್ಶಿ, ಹಿರಿಯ ನಾಗರಿಕ ಸಹೃದಯ ಸಂಘ, ನರಸಿಂಹರಾಜಾ ಕಾಲೋನಿ, ಬೆಂಗಳೂರು - 560 019

**ಕ್ಲಾಸ್ ಟೀಚರ್**

ಜೂನ್ ತಿಂಗಳು 1952ನೆಯ ಇಸವಿ. ಆಗ ನಾನು ಲೋಯರ್ ಸೆಕೆಂಡರಿ ಪಬ್ಲಿಕ್ ಪರೀಕ್ಷೆಯನ್ನು ಪ್ರಥಮ ಶ್ರೇಣಿಯಲ್ಲಿ ಪಾಸುಮಾಡಿ ಬೆಂಗಳೂರು ನಗರದ ಸುಪ್ರಸಿದ್ಧ ಪ್ರೌಢಶಾಲೆಯಾಗಿದ್ದ 'ಬೆಂಗಳೂರು ಹೈಸ್ಕೂಲ್' ಸೇರಿದ್ದೆ. ನನ್ನ ತರಗತಿಯಲ್ಲಿ ನನಗೆ ಅನೇಕ ಮಂದಿ ಸ್ನೇಹಿತರಿದ್ದರು. ಅವರಲ್ಲಿ ಒಬ್ಬ ಮಿತ್ರನ ಹೆಸರು ಎಸ್. ಎನ್. ಗಣೇಶ್. ನಾವುಗಳು ಯಾವಾಗಲಾದರೂ ಅವರ ಮನೆಯ ಕಡೆ ಹೋದಾಗ, ಅವನ ಅಣ್ಣನವರಲ್ಲಿ ಒಬ್ಬರನ್ನು ತೋರಿಸಿ, ಅವರು M.Sc. ಮಾಡಿದ್ದಾರೆಂದೂ, ವಿಜಯಾ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದಾರೆಂದೂ, ಹಾಡುಗಳನ್ನು ಚೆನ್ನಾಗಿ ಹೇಳುತ್ತಾರೆಂದೂ ಹೇಳುತ್ತಿದ್ದ. ನಾವುಗಳು ಸಣ್ಣಹುಡುಗರಾದ್ದರಿಂದ ಅವರನ್ನು ಮಾತನಾಡಿಸುವ ಧೈರ್ಯಮಾಡುತ್ತಿರಲಿಲ್ಲ.

ಜೂನ್ ತಿಂಗಳು 1955ನೆಯ ಇಸವಿ ನಾನು ಎಸ್.ಎಸ್.ಎಲ್.ಸಿ. ಪರೀಕ್ಷೆಯನ್ನು ಪಾಸುಮಾಡಿ ವಿಜಯಾ ಕಾಲೇಜನ್ನು ಸೇರಿದೆ. ಆಗ ನಾನು ಜೂನಿಯರ್ ಇಂಟರ್‌ಮೀಡಿಯಟ್ 'ಸಿ' ಸೆಕ್ಷನ್‌ನಲ್ಲಿದ್ದೆ. ನಮ್ಮ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಶ್ರೀ ವಿ. ಟಿ. ಶ್ರೀನಿವಾಸನ್ ಅವರು ಒಂದು ದಿನ ನಮ್ಮ class teacher ಅನ್ನು ಕರೆದುಕೊಂಡು ಬಂದು ವಿದ್ಯಾರ್ಥಿಗಳಿಗೆ ಪರಿಚಯ ಮಾಡಿಸಿಕೊಟ್ಟು ಇನ್ನುಮೇಲೆ ನಾವುಗಳು ಅವರು ಹೇಳಿದಂತೆ ಕೇಳಬೇಕು ಎಂದು ಹೇಳಿದರು. ಆ class teacher ಬೇರೆ ಯಾರೂ ಆಗಿರದೆ ನಮ್ಮ ಎನ್. ಕೃಷ್ಣಸ್ವಾಮಿಗಳೇ ಆಗಿದ್ದರು. ಅಂದಿನಿಂದ ಎರಡು ವರುಷಗಳ ಅವಧಿಯವರೆಗೆ ಎನ್.ಕೆ.ಯವರು ನನಗೆ class teacher ಮತ್ತು Physics ಅಧ್ಯಾಪಕರಾಗಿದ್ದರು.

**ಮೆಚ್ಚಿನ ಅಧ್ಯಾಪಕ**

ಆಗಿನ ವಿಜಯಾ ಕಾಲೇಜಿನ ಅಧ್ಯಾಪಕ ವರ್ಗದವರು ವಿದ್ಯಾವಂತರೂ ಮತ್ತು ವಿನಯಶೀಲರೂ ಆಗಿದ್ದರು. ವಿದ್ಯಾರ್ಥಿಗಳಿಗೆ ಹೆಚ್ಚಿನ ತಿಳುವಳಿಕೆಯನ್ನು ನೀಡಿ ಅವರ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರುತ್ತಿದ್ದರು. ಅಂಥವರಲ್ಲಿ ಶ್ರೀ ಎನ್. ಕೃಷ್ಣಸ್ವಾಮಿಗಳು ಒಬ್ಬರು. ಎನ್. ಕೃಷ್ಣಸ್ವಾಮಿಯವರು ಆಗ ನೋಡುವುದಕ್ಕೆ ಬಹಳ ಸುಂದರವಾಗಿದ್ದರು ಮತ್ತು ಯಾವಾಗಲೂ ಹಸನ್ಮುಖಿಗಳಾಗಿದ್ದರು. ಅವರು ಯಾವಾಗಲೂ ಸರಳವಾಗಿಯೂ ಶುಭ್ರವಾಗಿಯೂ ಖಾದಿ ಬಟ್ಟೆಗಳನ್ನು ಧರಿಸುತ್ತಿದ್ದರು. ಯಾವತ್ತೂ ತರಗತಿಗೆ ತಪ್ಪಿಸಿಕೊಳ್ಳದೆ ಸಮಯಕ್ಕೆ ಸರಿಯಾಗಿ ಹಾಜರಾಗುತ್ತಿದ್ದರು. ಪಾಠಮಾಡಿದ ಬಳಿಕ ಪ್ರಶ್ನೆಗಳಿಗೆ ಅವಕಾಶ ಕೊಡುತ್ತಿದ್ದರು. ಕಪ್ಪುಫಲಕದ ಮೇಲೆ Physics ಚಿತ್ರಗಳನ್ನು ಬರೆದು ನಮಗೆ notes ಕೊಡುತ್ತಿದ್ದರು. ಜಾಣವಿದ್ಯಾರ್ಥಿಗಳನ್ನೂ ಮತ್ತು ತುಂಟ ವಿದ್ಯಾರ್ಥಿಗಳನ್ನೂ ಒಂದೇ ತರಹ ಪ್ರೀತಿ ವಿಶ್ವಾಸಗಳಿಂದ ಕಾಣುತ್ತಿದ್ದರು. ಇವರು ಹಿಂದೂ, ಮುಸಲ್ಮಾನ ಮತ್ತು ಕ್ರಿಶ್ಚಿಯನ್ ವಿದ್ಯಾರ್ಥಿಗಳನ್ನು ಏಕಭಾವನೆಯಿಂದ ನೋಡುತ್ತಿದ್ದರು. ಇವರ ಮೇಲೆ ಎಲ್ಲಾ ವಿದ್ಯಾರ್ಥಿಗಳಿಗೂ ಹೆಚ್ಚಿನ ಗೌರವ ಇತ್ತು ಮತ್ತು ಎನ್.ಕೆ. ಅವರು ಎಲ್ಲರ ಮೆಚ್ಚಿನ ಅಧ್ಯಾಪಕರಾಗಿದ್ದರು. ಎನ್. ಕೆ. ಅವರನ್ನು ಆಗ ಕೆಲವು ವಿದ್ಯಾರ್ಥಿಗಳು 'ಶ್ರೀಕೃಷ್ಣ ಪರಮಾತ್ಮ' ಎಂದು ಕರೆಯುತ್ತಿದ್ದರು.

ನಾನು ವಿಜಯಾ ಕಾಲೇಜಿನಲ್ಲಿ ಇದ್ದಾಗ ಎನ್. ಕೆ. ಅವರು ನಮ್ಮ ಕ್ಲಾಸ್ ಟೀಚರ್ ಮತ್ತು Sports Secretary ಸಹ ಆಗಿದ್ದರು. ನಾನು Junior Intermediateನಲ್ಲಿ Class Representative ಆಗಿಯೂ, Senior Intermediateಗೆ ಬಂದಾಗ ಕಾಲೇಜಿನ ಕರ್ನಾಟಕ ಸಂಘದ ಕಾರ್ಯದರ್ಶಿಯಾಗಿಯೂ ವಿದ್ಯಾರ್ಥಿಗಳಿಂದ ಚುನಾಯಿತನಾಗಿದ್ದೆ. ಹಾಗಾಗಿ ನನಗೆ ಎನ್. ಕೆ. ಅವರ ಸಹಾಯ ಮತ್ತು ಮಾರ್ಗದರ್ಶನದ ಆವಶ್ಯಕತೆ ಇತ್ತು. ಅವರ ಹತ್ತಿರ ಹೆಚ್ಚಿನ ಸಲ ಹೋಗುವ ಮತ್ತು ಮಾತನಾಡುವ ಅವಕಾಶಗಳು ನನಗೆ ಒದಗಿಬರುತ್ತಿತ್ತು.

ಆಗ ವಿಜಯಾ ಕಾಲೇಜಿನಲ್ಲಿ ಒಂದು ಒಳ್ಳೆಯ Basket Ball Team ಇತ್ತು. ಮತ್ತು ಅದು ಬಹಳ ಪ್ರಸಿದ್ಧವಾಗಿತ್ತು. ಅದರಲ್ಲಿ ತುಂಬಾ ಒಳ್ಳೆಯ ಆಟಗಾರರಿದ್ದರು. ನಮ್ಮಲ್ಲಿ ಕೆಲವು ವಿದ್ಯಾರ್ಥಿಗಳಿಗೆ, ತಾವೂ ಸಹ Basket Ball Teamನಲ್ಲಿ ಆಡಬೇಕೆಂದು ಆಸೆ ಬಂತು. ಆದರೆ ನಮಗೆ ಆಟ ಆಡುವುದಕ್ಕೆ ಬರುತ್ತಿರಲಿಲ್ಲ ಮತ್ತು teamನವರು ನಮ್ಮನ್ನು ಆಟಕ್ಕೆ ಸೇರಿಸಿಕೊಳ್ಳುತ್ತಿರಲಿಲ್ಲ. ಆಗ ನಾವು ಸುಮ್ಮನೆ ಗಲಾಟೆ ಮಾಡುತ್ತಿದ್ದೆವು. ನಮ್ಮ ಮೇಲೆ complaint ಸಹ ಹೋಗಿತ್ತು. ಆಗ ಒಂದು ದಿನ Sports Secretaryಯಾಗಿದ್ದ ಎನ್. ಕೆ. ಅವರು ಗಲಾಟೆಮಾಡುತ್ತಿದ್ದ ವಿದ್ಯಾರ್ಥಿಗಳನ್ನು ಕರೆದು "ನೀವುಗಳು ಹೋಗಿ ಆಡುವವರಿಗೆ ಸುಮ್ಮನೆ ತೊಂದರೆ ಮಾಡಬೇಡಿ, ಬೇಕಾದರೆ ನೀವು B Team ಅಂತ ಮಾಡಿಕೊಂಡು ಬೇರೆಯಾಗಿ ಆಡಿಕೊಳ್ಳಿ" ಎಂದು ಹೇಳಿ ನಮಗೆ ಒಂದು ಹೊಸ Basket Ball ಕೊಡಿಸಿ "ಇನ್ನು ಮೇಲೆ B Teamಗೆ ನೀನೇ Captain" ಎಂದು ಹೇಳಿ ಕಳುಹಿಸಿದರು. ಮನಸ್ಸಿಗೂ ಸಮಾಧಾನ ಉಂಟುಮಾಡಿದರು. ಅಂದಿನಿಂದ ನನಗೆ Basket Ball ಆಟದ ಮೇಲೆ ಆಸಕ್ತಿ ಬಂದು ನಾನು Medical College ವಿದ್ಯಾರ್ಥಿಯಾದ ಮೇಲೂ ಅನೇಕ ವರುಷಗಳು College Teamಗೆ ಪ್ರತಿನಿಧಿಸುತ್ತಿದ್ದೆ.

**ಏಕೆ ಪಾನಕ ತರಲಿಲ್ಲ!**

ವಿದ್ಯಾರ್ಥಿಗಳಾದ ನಾವು ವಿಜಯಾ ಕಾಲೇಜನ್ನು ಬಿಡುವ ಸಮಯ ಬಂದಾಗ 'Class Socials' ಮಾಡಬೇಕೆಂದು ನಿರ್ಧರಿಸಿದೆವು. ಆಗ ನಮ್ಮ Class Teacher ಆಗಿದ್ದ ಎನ್.ಕೆ. ಅವರ ಸಹಕಾರ ಮತ್ತು ಮಾರ್ಗದರ್ಶನವನ್ನು ಕೋರಿದೆವು. ಅವರು ಸಂತೋಷದಿಂದ ಒಪ್ಪಿಕೊಂಡರು. ನಮ್ಮಗಳ ಹತ್ತಿರ ಹಾಡುಗಳನ್ನು ಹೇಳಿಸಿದರು. ಚಿಕ್ಕನಾಟಕಗಳನ್ನು ಮಾಡಿಸಿದರು. ಭಾಷಣಗಳನ್ನು ಮಾಡಿಸಿದರು ಮತ್ತು photo ಕೂಡ ತೆಗೆಸಿದರು. ಎಲ್ಲಕ್ಕಿಂತ ಹೆಚ್ಚಾಗಿ ಎಲ್ಲ ವಿದ್ಯಾರ್ಥಿಗಳಿಗೂ ಮತ್ತು ಅಧ್ಯಾಪಕರಿಗೂ ರಾತ್ರಿಊಟವನ್ನು ನಮ್ಮಗಳ ಕೈನಲ್ಲಿ ಏರ್ಪಾಟು ಮಾಡಿಸಿದ್ದರು. ಯಾವ ಯಾವ ವಿದ್ಯಾರ್ಥಿಗಳ ಕೈನಲ್ಲಿ ಸಾಧ್ಯವೋ ಅಂತಹವರು ಮನೆಯಿಂದ ಏನಾದರೂ ಒಂದು ತಿನ್ನುವ ಪದಾರ್ಥವನ್ನು ಮಾಡಿಸಿಕೊಂಡು ಬರಬೇಕೆಂದು ಹೇಳಿದರು. ಅನೇಕ ಮಂದಿ ವಿದ್ಯಾರ್ಥಿಗಳು ಎಲ್ಲರಿಗೂ ಆಗುವಷ್ಟು ಊಟ ತಿಂಡಿಗಳನ್ನು ಮಾಡಿಕೊಂಡು ಬಂದಿದ್ದರು. ನಾನೂ ಸಹ ನಮ್ಮ ತಾಯಿಯವರ ಕೈಯಿಂದ ಎರಡು ತರಹದ ಕೋಸಂಬರಿಯನ್ನು ಮಾಡಿಸಿಕೊಂಡು ಹೋಗಿದ್ದೆ. ಆಗ ಎನ್. ಕೆ. ಅವರು ನನ್ನನ್ನು ಕುರಿತು, "ಏಕೆ ಪಾನಕ ಮಾಡಿಸಿಕೊಂಡು ಬರಲಿಲ್ಲಾ?" ಎಂದು ತಮಾಷೆಮಾಡಿದರು ಮತ್ತು ಎಲ್ಲರನ್ನೂ ನಗೆಗಡಲಿನಲ್ಲಿ ಮುಳುಗಿಸಿದರು.

**ಆಶ್ರಮದ ಸಂಪರ್ಕ**

ಬಸವನಗುಡಿಯ ಶ್ರೀರಾಮಕೃಷ್ಣ ಆಶ್ರಮದಲ್ಲಿ 1953 ರಲ್ಲಿ 'ವಿವೇಕಾನಂದ ಬಾಲಕ ಸಂಘ'ವನ್ನು ಆರಂಭಿಸಿದರು. ನಮ್ಮ ಹೈಸ್ಕೂಲ್ ವಿದ್ಯಾರ್ಥಿಯಾಗಿದ್ದ ಮತ್ತು ನನ್ನ ಸ್ನೇಹಿತನಾಗಿದ್ದ ಪ್ರಸನ್ನ ಎಂಬುವವನ ಬಲವಂತಕ್ಕೆ ಕಟ್ಟುಬಿದ್ದು ಒಂದೆರಡು ದಿನ ಅದಕ್ಕೆ ಹೋದೆ. ಆಗ ನನಗೆ ನಾನು ಬಾಲಕನಲ್ಲ ಪ್ರೌಢಶಾಲೆಯ ದೊಡ್ಡ ಹುಡುಗ ಎಂಬ ಭಾವನೆಬಂತು. ಬಾಲಕಸಂಘವನ್ನು ತಕ್ಷಣ ಬಿಟ್ಟುಬಿಟ್ಟೆ. ಆದರೆ ರಾಮಕೃಷ್ಣ ಆಶ್ರಮಕ್ಕೆ ಹೋಗುವುದನ್ನು ಬಿಡಲಿಲ್ಲ. ರಾಮಕೃಷ್ಣ ಆಶ್ರಮಕ್ಕೆ ಹೋಗುವುದಕ್ಕೆ ಪ್ರೇರೇಪಿಸಿದವರು ನಮ್ಮ ದಿವಂಗತ ತಂದೆ ಹೆಚ್. ಎಸ್. ಕೃಷ್ಣಸ್ವಾಮಿಯವರು. ನಂತರ ಆಸಕ್ತಿಯನ್ನು ಕೆರಳಿಸಿ ಪ್ರೋತ್ಸಾಹಿಸಿದವರು ಶ್ರೀ ಕಿಟ್ಟಿಮೇಷ್ಟ್ರು. ನಾನು ಕಿಟ್ಟಿ ಮೇಷ್ಟ್ರ ಭಜನೆಯನ್ನು ಕೇಳುವುದಕ್ಕೆ ಆಶ್ರಮಕ್ಕೆ ಹೋಗುತ್ತಿದ್ದೆ. ಅವರು ನನ್ನನ್ನು ನೋಡಿ, "ಏನಯ್ಯಾ ನೀನೂ ಬಂದುಬಿಟ್ಟಿದ್ದೀಯಾ? ಎಂದು ಆಶ್ಚರ್ಯದಿಂದ ಕೇಳಿ" "ಆದಾಗಲೆಲ್ಲಾ ಇಲ್ಲಿಗೆ ಬರುತ್ತಿರು ಒಳ್ಳೆಬುದ್ಧಿ ಬರುತ್ತೇ" ಎಂದು ನಗುತ್ತಾ ಹೇಳುತ್ತಿದ್ದರು.

ಒಂದುಸಲ ಆಶ್ರಮಕ್ಕೆ ಹೋದಾಗ ನಾನು ಗಿಡದಿಂದ ಒಂದು ಮಾವಿನ ಕಾಯಿಯನ್ನು ಕಿತ್ತುಬಿಟ್ಟೆ. ಅದೇ ಸಂದರ್ಭದಲ್ಲಿ ನನ್ನ ಕೈಗೆ ಒಂದು ಕರಿಗೊದ್ದ ಕಚ್ಚಿಬಿಟ್ಟಿತು. ನಾನು ಕೈಯನ್ನು ಕೆರೆದುಕೊಳ್ಳುತ್ತಿದ್ದೆ. ಆಗ ಅಲ್ಲಿಗೆ ಬಂದ ಎನ್.ಕೆ.ಯವರು ಏನಾಯಿತು ಎಂದು ಕೇಳಿ, "ಆಶ್ರಮದ

ಕಾಯಿಗಳನ್ನು ತುಂಟ ಹುಡುಗರು ಕೀಳಲು ಆಶ್ರಮದ ಗೊದ್ದಗಳು ಕೂಡ ಬಿಡುವುದಿಲ್ಲ ನೋಡು" ಎಂದು ಹೇಳಿದರು.

**ಮರೆಯಲಾಗದ ಅಧ್ಯಾಪಕರು**

ನಾನು ವಿವೇಕಾನಂದ ಸೇವಾಶ್ರಮದ ವೈದ್ಯಕೀಯ ಸೇವಾವಿಭಾಗದಲ್ಲಿ ನನ್ನ ಕೈಲಾದ ಅಳಿಲುಸೇವೆಯನ್ನು ಮಾಡಿದಾಗ ಅದನ್ನು ನೋಡಿ ಎಸ್.ಕೆ.ಯವರು ಸಂತೋಷಪಟ್ಟು ಪ್ರೋತ್ಸಾಹಿಸುತ್ತಿದ್ದಾರೆ. ನನಗೆ ಅವರು "ನೀನು ಹೆಚ್. ಕೆ. ನಾಗರಾಜ ಹೆಚ್ಚಿಗೆ ಕೆಲಸಮಾಡು ಮತ್ತು ಕಡಿಮೆ ಮಾತು ಆಡು" ಎಂದು ತಿಳುವಳಿಕೆ ನೀಡಿದ್ದಾರೆ. ನನ್ನ ಜೀವನದಲ್ಲಿ ಮರೆಯಲಾಗದ ಮತ್ತು ಮರೆಯಬಾರದ ವ್ಯಕ್ತಿತ್ವವನ್ನುಳ್ಳ ನನ್ನ ಗೌರವಾನ್ವಿತ ಅಧ್ಯಾಪಕರುಗಳಲ್ಲಿ ಒಬ್ಬರು ನನ್ನ ನೆಚ್ಚಿನ ಮತ್ತು ಮೆಚ್ಚಿನ ಸನ್ಮಾನ್ಯ ಶ್ರೀ ಕಿಟ್ಟಿಮೇಷ್ಟು ಎಂದರೆ ತಪ್ಪಾಗಲಾರದು.

(ಹಳೆಯ ವಿದ್ಯಾರ್ಥಿ, ವಿಜಯಾ ಕಾಲೇಜು, ಬೆಂಗಳೂರು)

* * * * *

# ಬಗ್ಗದ ಗಿಡ, ಬಗ್ಗಿದ ಮರ

ಇಂಗ್ಲಿಷ್‌ನಲ್ಲಿ youth and white paper take impressions alike ಎಂಬ ಮಾತಿದೆ. ಎಳೆಯತನದಲ್ಲಿ ಉಂಟಾಗುವ ಅನುಭವಗಳು ಮನಸ್ಸಿನ ಮೇಲೆ ಅವುಗಳ ದೃಢವಾದ ಪಡಿಯಚ್ಚು ಮೂಡಿಸುತ್ತವೆ. ಇದರಿಂದ ಒಳ್ಳೆಯ ಪರಿಣಾಮ ಅಥವಾ ಕೆಟ್ಟ ಪರಿಣಾಮ. ಈ ಕಾರಣ, ಯುವಜನರು ತಮ್ಮ ಚಾರಿತ್ರ್ಯದ ಬೆಳವಣಿಗೆಗೆ ವಿಶೇಷ ಗಮನ ಕೊಡಬೇಕೆಂದು ಭಗವಾನ್ ಶ್ರೀರಾಮಕೃಷ್ಣರ ಅಭಿಪ್ರಾಯ.

ಹಿರಿಯ ಯುವಕ ಮಹೇಂದ್ರನಾಥಗುಪ್ತ ಪ್ರಥಮಥಃ ಭಗವಾನರನ್ನು ಭೇಟಿ ಮಾಡಿದಾಗ ಅವರೆಂದರು, "ಎಳೆ ಸಸಿಯನ್ನು ಹಸು, ಮೇಕೆಗಳು ತಿಂದು ನಾಶಪಡಿಸದಿರುವಂತೆ ಸಸಿಯ ಸುತ್ತ ಬೇಲಿ ಬಹಳ ಆವಶ್ಯಕ. ಮುಂದೆ ಸಸಿ ಮರವಾಗಿ ಬೆಳೆದ ನಂತರ ಬೇಲಿಯ ಆವಶ್ಯಕತೆಯಾದರೂ ಏನಿದೆ? ಆಗ ಆನೆ ಬಂದು ಮರದ ಬುಡವನ್ನು ಜಗ್ಗಿಸಿದರೂ ಮರಕ್ಕೆ ಅಪಾಯವಿಲ್ಲ." ಇದೇ ರೀತಿ ಎಳೆಯತನದಲ್ಲಿ ಶಿಸ್ತಿನ, ಸಂಯಮದ ಬೇಲಿ ಅತ್ಯವಶ್ಯಕ. ಆ ಕ್ರಮದಲ್ಲಿ ಬೆಳೆದ ವ್ಯಕ್ತಿ ಜೀವನದಲ್ಲಿ ಸನ್ಮಾರ್ಗದಲ್ಲಿದ್ದು ತನ್ನ ಧ್ಯೇಯವನ್ನು ಸಾಧಿಸುತ್ತಾ ಲೋಕಹಿತಕಾರ್ಯದಲ್ಲಿ ತೊಡಗುವನು.

ಮುಂದೊಂದು ದಿನ ನರೇಂದ್ರನೂ ಅವನ ಮಿತ್ರರೂ ರಾಮಕೃಷ್ಣರನ್ನು ಕಾಣಲು ಬಂದಾಗ ಅವರೆಂದರು, "ಸತ್ಸಂಗವು ತುಂಬಾ ಆವಶ್ಯಕ, ಸತ್ಸಂಗದಿಂದ ನಮಗೆ ಭಗವಂತನ ನೆನಪುಂಟಾಗುವುದಲ್ಲದೇ ನಾವು ಒಳ್ಳೆಯ ಮಾರ್ಗವನ್ನು ಅನುಸರಿಸುತ್ತೇವೆ." ಈ ಸಂದರ್ಭದಲ್ಲಿ, ದುಷ್ಟರು ಎದುರಾದರೆ ಏನು ಮಾಡಬೇಕು? ಎಂಬ ಪ್ರಶ್ನೆಗೆ ಅವರೆಂದರು: "ದುಷ್ಟರಲ್ಲೂ ಭಗವಂತನಿರುವುದು ನಿಜ. ಅಂದಮಾತ್ರಕ್ಕೆ ದುಷ್ಟರ ಸಹವಾಸ ಮಾಡಬೇಕೆಂದೇನಲ್ಲ. ದುಷ್ಟರನ್ನು ಕಂಡರೆ ದೂರದಿಂದಲೇ ನಮಸ್ಕರಿಸು. ಹುಲಿಯಲ್ಲೂ ದೇವರಿದ್ದಾನೆಂದ ಮಾತ್ರಕ್ಕೆ ಅದನ್ನು ಅಪ್ಪಿಕೊಳ್ಳುವುದು ಸಾಧ್ಯವೇ? 'ವ್ಯಾಘ್ರ ನಾರಾಯಣ' ಎಂದು ದೂರದಿಂದ ಅದಕ್ಕೆ ನಮಸ್ಕರಿಸು."

ಭಗವಾನರು ಈ ಬಗ್ಗೆ ದೃಷ್ಟಾಂತ ಕಥೆ ಹೇಳುತ್ತಾರೆ: "ಗುರು, ಶಿಷ್ಯರಿಗೆ ಸರ್ವದರಲ್ಲೂ ಬ್ರಹ್ಮನೇ ಇರುತ್ತಾನೆ ಎಂದು ಉಪದೇಶಿಸಿದರು. ಒಬ್ಬ ಶಿಷ್ಯ ದಾರಿಯಲ್ಲಿ ನಡೆದು ಬರುತ್ತಿರುವಾಗ ಮದಿಸಿದ ಆನೆಯೊಂದು ಎದುರಾಗಿ ಬರುತ್ತಿದ್ದು ಅದರ ಮೇಲಿದ್ದ ಮಾವಟಿಗ ದೂರ ಹೋಗು, ಅಪಾಯ ಎಂದು ಎಚ್ಚರಿಕೆ ನೀಡುತ್ತಲೇ ಇದ್ದ. ಹುಡುಗ ತರ್ಕಿಸಿದ: "ನನ್ನಲ್ಲೂ ಆನೆಯಲ್ಲೂ ಇರುವುದು ಒಬ್ಬನೇ ಬ್ರಹ್ಮವಸ್ತುವೇ ಆದಮೇಲೆ ಬ್ರಹ್ಮ ಬ್ರಹ್ಮನಿಗೆ ಏನು ತೊಂದರೆ ಮಾಡುತ್ತಾನೆ" ಎಂದುಕೊಂಡು ರಸ್ತೆಯಲ್ಲೇ ನಿಂತ. ಕ್ಷಣಮಾತ್ರದಲ್ಲಿ ಆನೆ ಇವನನ್ನು ಸೊಂಡಿಲಿನಿಂದೆತ್ತಿ ಎಸೆದ ಕಾರಣ ಆತ ವಿಪರೀತವಾಗಿ ಘಾಸಿಗೊಂಡನು. ಮುಂದೆ ನಡೆದುದನ್ನು ಗುರುವಿಗೆ ವಿವರಿಸಿದಾಗ ಗುರುವೆಂದರಂತೆ: "ಆನೆ ಬ್ರಹ್ಮವೇನೋ ಸರಿ, ಆದರೆ ಅದರ ಮೇಲಿದ್ದ ಮಾವಟಿಗ ಬ್ರಹ್ಮನ ಮಾತನ್ನೇಕೆ ನೀನು ಕೇಳಲಿಲ್ಲ?"

ಹೀಗೆ ಸತ್ಸಂಗದ ಮಹಿಮೆಯನ್ನು ಶ್ರೀರಾಮಕೃಷ್ಣರು ಯುವಜನತೆಗೆ ವಿವರಿಸಿದ್ದಾರೆ. ಇದನ್ನು ಶ್ರೀಶಂಕರಾಚಾರ್ಯರು ಈ ರೀತಿ ತಿಳಿಸುತ್ತಾರೆ:

**ಸತ್ಸಂಗತ್ವೇ ನಿಸ್ಸಂಗತ್ವಂ ನಿಸ್ಸಂಗತ್ವೇ ನಿರ್ಮೋಹತ್ವಂ । ನಿರ್ಮೋಹತ್ವೇ ನಿಶ್ಚಲತತ್ತ್ವಂ ನಿಶ್ಚಲತತ್ತ್ವಂ ಜೀವನ್ಮುಕ್ತಿಃ ॥**

ಸತ್ಪುರುಷರ ಸಹವಾಸದಿಂದ ಪ್ರಾಪಂಚಿಕ ವಸ್ತುಗಳಲ್ಲಿ ಅತ್ಯಾಸಕ್ತಿ ಹೋಗಿ, ಅದರ ಪರಿಣಾಮವಾಗಿ ಪ್ರಾಪಂಚಿಕ ವಸ್ತುಗಳ ಮೇಲಿನ ವ್ಯಾಮೋಹ ಕೂಡ ಹೋಗುವುದು. ಹೀಗಾಗಿ ಮನಸ್ಸು ನಿಶ್ಚಲವಾಗುವುದು. ನಿಶ್ಚಲ ಮನಸ್ಸಿನವನಿಗೆ ಅಂತಿಮದಲ್ಲಿ ಮುಕ್ತಿ ದೊರೆಯುವುದು.

ಜೀವನ್ಮುಕ್ತಿಯನ್ನು ನಮ್ಮ ಚರಮಧ್ಯೇಯವನ್ನಾಗಿಸಿ ಒಳ್ಳೆಯ ಜೀವನ ನಡೆಸುವುದರ ಜೊತೆಗೆ, ಸತ್ಸಂಗದ ಪರಿಣಾಮದಿಂದ ಸಂಕಲ್ಪಶಕ್ತಿ ವೃದ್ಧಿಯಾಗಿ ವಿದ್ಯಾರ್ಥಿದೆಶೆಯಲ್ಲಿರುವವರಿಗೆ ಪಾಠಪ್ರವಚನಗಳಲ್ಲಿ ಏಕಾಗ್ರತೆ, ಪರಿಣತಿ, ಶುದ್ಧಚಾರಿತ್ರ್ಯವೂ ಲಭಿಸುವುದು. ಭಗವಾನ್ ಶ್ರೀರಾಮಕೃಷ್ಣರು ಯುವಜನರು ಈ ರೀತಿಯಲ್ಲಿ ಬೆಳೆದು ಸತ್ಪ್ರಜೆಗಳಾಗಬೇಕೆಂದು ಆಶಿಸಿದರು.

**ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೇ?**

(ಡಾ॥ ಪಿ. ಎಸ್. ನಾರಾಯಣರಾವ್ ಅವರ '**ನಡೆಮುಂದೆ**' ಪುಸ್ತಕದಿಂದ)

# ನಾನು ಕಂಡ ದಕ್ಷಿಣಾಮೂರ್ತಿ

✍ ಮೈಸೂರು ಬಿ. ಬಾಲು

***ಗುರು ಪೂಜಾಪ್ರಸಾದೇನ ಸಿದ್ಧಿಂ ಪ್ರಾಪ್ನೋತಿ ಸಾಧಕಃ***

*(ಸದ್ಗುರು ಪೂಜೆಯ ಫಲವಾಗಿ ಸಾಧಕನು ಸಕಲ ಸಿದ್ಧಿಗಳನ್ನು ಹೊಂದುತ್ತಾನೆ.)*

**ಸು**ಮಾರು ಐದು ವರ್ಷಗಳ ಹಿಂದೆ (2001) ನಾನು ಬ್ಯಾಂಕಿನ ಸೇವೆಯಿಂದ ನಿವೃತ್ತಿಪಡೆದಾಗ ನನ್ನ ಮುಂದಿದ್ದ ಮೊದಲ ಪ್ರಶ್ನೆ – ಸಮಯವನ್ನು ಹೇಗೆ ಕಳೆಯುವುದು? ಮೂವತ್ತೊಂಬತ್ತು ವರ್ಷಗಳ ಕಾಲ ನಿರಂತರ ಚಟುವಟಿಕೆಯಿಂದ ಕಾರ್ಯನಿರತನಾಗಿದ್ದ ನನಗೆ ಇದು ದೊಡ್ಡ ಪ್ರಶ್ನೆಯೇ. ನಾನಾಗಿಯೇ ರೂಪಿಸಿಕೊಂಡ ಕಾರ್ಯಕ್ರಮವೆಂದರೆ, ಮೊದಲು ಬೆಳಗಿನ ಸಮಯದಲ್ಲಿ 'ವಾಕಿಂಗ್' ಶುರು ಮಾಡುವುದು. ಮತ್ತು ಸಾಯಂಕಾಲ ಆಶ್ರಮ(ಶ್ರೀರಾಮಕೃಷ್ಣ ಆಶ್ರಮ)ಕ್ಕೆ ಹೋಗುವುದು. ತಿಮ್ಮೇಶಪ್ರಭು (ಹರಿಹರಗುಡ್ಡ) ಉದ್ಯಾನವನ ಮನೆಯ ಹತ್ತಿರವೇ ಇದ್ದುದರಿಂದ ನನ್ನ 'ವಾಕಿಂಗ್' ಕಾರ್ಯಕ್ರಮ ಅಲ್ಲಿಯೇ ನಡೆಸುವುದೆಂದು ನಾನು ಮತ್ತು ನನ್ನ ಶ್ರೀಮತಿ (ನಿರ್ಮಲ) ನಿರ್ಧರಿಸಿದೆವು.

ಮೊದಲನೆಯದಿನ ನಾವು ಉದ್ಯಾನವನಕ್ಕೆ ಹೋದಾಗ ನಮಗೆ ಮೊದಲು ಕಣ್ಣಿಗೆ ಕಂಡಿದ್ದು, ಖಾದಿಬಟ್ಟೆಯುಟ್ಟ ಸುಮಾರು ವಯಸ್ಸಾದ ವ್ಯಕ್ತಿ. ಕೈಯಲ್ಲಿ ದಂಡ, ಬಾಯಲ್ಲಿ ಸಂಸ್ಕೃತ ಶ್ಲೋಕ ಪಠಣ. ಅದು ಯಾವ ಶ್ಲೋಕವೆಂದು ತಿಳಿಯಲು ಅವರ ಹಿಂದೆಯೇ ಹೊರಟೆ. ಮೇಲುಗಡೆ ಇರುವ ಹರಿಹರೇಶ್ವರ ದೇವಸ್ಥಾನದ ಬಳಿ ಬರುವ ವೇಳೆಗೆ ಗೊತ್ತಾಯಿತು – ಅದು ಶ್ರೀದಕ್ಷಿಣಾಮೂರ್ತಿಸ್ತೋತ್ರ ವೆಂದು. ದೇವಸ್ಥಾನದ ಮುಂಭಾಗಕ್ಕೆ ಬರುವ ಹೊತ್ತಿಗೆ ಸರಿಯಾಗಿ ಸ್ತೋತ್ರ ಮುಗಿಯಿತು. ನಂತರ ದೇವರ ಕಡೆ ಕೈಮುಗಿದು ಗಾಯತ್ರೀಮಂತ್ರ ಹೇಳಿ ಪ್ರದಕ್ಷಿಣೆ ಹೊರಟರು (ಈವತ್ತಿಗೂ ಇದೇ ಕಾರ್ಯಕ್ರಮ ಕರಾರುವಾಕ್ಕಾಗಿ ನಡೆಯುತ್ತಿದೆ).

ಹೀಗೆ ಎರಡು, ಮೂರು ದಿನಗಳು ಕಳೆದ ಮೇಲೆ, ಇನ್ನೂ ಕೆಲವರು ಆ ಮಹಾಶಯರ ಜೊತೆ ಇರುವುದು ತಿಳಿಯಿತು. ನಾನೂ ಸಹ ತುಸು ಸಂಕೋಚದಿಂದ ನನ್ನ ಪರಿಚಯ ಮಾಡಿಕೊಂಡು ಅವರ ಗುಂಪಿಗೆ ಸೇರ ಬಯಸಿದೆ. ಎಲ್ಲರೂ (ಶ್ರೀ ಶಂಕರನಾರಾಯಣ ರಾವ್, ಶ್ರೀ ರಾಮರಾವ್, ಶ್ರೀ ದಾಸ್, ಶ್ರೀ ಚನ್ನಪ್ಪ, ಶ್ರೀ ವೆಂಕಟರಮಣಯ್ಯ, ಶ್ರೀ ಪಾರ್ಥಸಾರಥಿ) ನನ್ನನ್ನು ಆತ್ಮೀಯವಾಗಿ ಬರಮಾಡಿಕೊಂಡರು. ಆದರೆ ದಂಡ ಹಿಡಿದು, ಕಾವಿ/ಖಾದಿಬಟ್ಟೆ ಧರಿಸಿದ ಮಹಾಶಯ ಯಾರು ಎಂಬ ಕುತೂಹಲ ಇನ್ನೂ ಹಾಗೇ ಇತ್ತು. ಆಗಲೇ ಹತ್ತಿರವಾಗಿದ್ದ ಶ್ರೀ ಚನ್ನಪ್ಪನವರ ಮೂಲಕ ಅವರು ಪ್ರೊಫೆಸರ್ ಕೃಷ್ಣಸ್ವಾಮಿಯವರೆಂದೂ, ಶ್ರೀರಾಮಕೃಷ್ಣ ಆಶ್ರಮದ ಜೊತೆ ಅತ್ಯಂತ ನಿಕಟ ಸಂಬಂಧವಿರುವ ಭಕ್ತರೆಂದೂ, ಒಳ್ಳೆಯ ಭಜನೆಗಾಯಕರೆಂದೂ ತಿಳಿಯಿತು. ಆಶ್ರಮದ ವಿಶೇಷ ದಿನಗಳಲ್ಲಿ ಮೊದಲು ಹಾಡುವ 'ಕಿಟ್ಟಿ ಮಾಸ್ಟರ್' ಇವರೇ ಎಂದು ತಿಳಿಯಲು ನನಗೆ ಶ್ರಮಪಡಬೇಕಾಗಲಿಲ್ಲ.

ಸರಿ, ಹಿರಿಯರ ಗುಂಪಿಗೆ ಕಿರಿಯ ಸದಸ್ಯನಾದೆ. ಕಿಟ್ಟಿ ಮಾಸ್ಟರ್ ಮನೆಯ ಎಲ್ಲ ಸದಸ್ಯರ ಪರಿಚಯವಾಯಿತು. ಕ್ರಮೇಣ ಅವರ ಅಧ್ಯಕ್ಷತೆಯಲ್ಲಿ 'ಸ್ನೇಹರಂಗ' ಹುಟ್ಟಿತು. ಹಾಗೆಯೇ ಪ್ರತಿ ಸೋಮವಾರ ಭಜನಾ ಕಾರ್ಯಕ್ರಮ ಗಳು ಶುರುವಾದವು.

ನನ್ನ ಬಿಡುವಿನ ಕಾಲದಲ್ಲಿ ಸ್ವಲ್ಪವಾದರೂ ಸೇವೆಮಾಡ ಬೇಕೆಂದಿದ್ದ ನನಗೆ ಶ್ರೀ ಕೃಷ್ಣಸ್ವಾಮಿಯವರು ಬೆಳೆಸಿದ ಸ್ವಾಮಿ ವಿವೇಕಾನಂದ ವಿದ್ಯಾ ಸಂಸ್ಥೆಯಲ್ಲಿ ಕಿಂಚಿತ್ ಸೇವೆ ಮಾಡುವ ಅವಕಾಶ ಒದಗಿ ಬಂತು.

ಕಿಟ್ಟಿ ಮಾಸ್ಟರರ ಜೀವನ ಶ್ರೀರಾಮಕೃಷ್ಣ ಪರಂಪರೆಯ ಮೂಲ ಉದ್ದೇಶದ, ಅಂದರೆ ಸೇವೆ ಮತ್ತು ತ್ಯಾಗ ಇವುಗಳ ಜೀವಂತ ಉದಾಹರಣೆ. ಅವರ ಸಂಪರ್ಕ ಹೊಂದಿದವರಿಗೂ ಈ ಗುಣಗಳು ಅಂಟುತ್ತವೆ ಮತ್ತು ಮೈಗೂಡಿಕೊಳ್ಳುತ್ತವೆ. ಸ್ವಲ್ಪ ಸಮಯದಲ್ಲೇ ತುಂಬ ಹತ್ತಿರವಾಗುವ ವ್ಯಕ್ತಿತ್ವ ಅವರದು. ಅವರ ಆಶೀರ್ವಾದ ನಮ್ಮೆಲ್ಲರ ಮೇಲೆ ಸದಾಕಾಲ ಇರಲಿ.

ಶ್ರೀ ಕಿಟ್ಟಿ ಮಾಸ್ಟರರು ದಿನವೂ ಹೇಳುವ ದಕ್ಷಿಣಾಮೂರ್ತಿಸ್ತೋತ್ರದಲ್ಲಿ ಬರುವ ಕೆಳಕಂಡ ಶ್ಲೋಕ ನನಗೆ ತುಂಬ ಇಷ್ಟವಾದದ್ದು. ಆದರಿಂದಲೇ ಈ ನನ್ನ ಭಕ್ತಿಪೂರ್ವಕ ಲೇಖನವನ್ನು ಸಂಪನ್ನಗೊಳಿಸುತ್ತೇನೆ.

**ಬಾಲ್ಯಾದಿಷ್ವಪಿ ಜಾಗ್ರದಾದಿಷು ತಥಾ**
**ಸರ್ವಾಸ್ವವಸ್ಥಾಸ್ವಪಿ**
**ವ್ಯಾವೃತ್ತಾಸ್ವನುವರ್ತಮಾನಮಹ**
**ಮಿತ್ಯಂತಃ ಸ್ಫುರಂತಂ ಸದಾ**
**ಸ್ವಾತ್ಮಾನಂ ಪ್ರಕಟೀಕರೋತಿ ಭಜತಾಂ**
**ಯೋ ಮುದ್ರಯಾ ಭದ್ರಯಾ**
**ತಸ್ಮೈ ಶ್ರೀಗುರುಮೂರ್ತಯೇ ನಮ ಇದಂ**
**ಶ್ರೀದಕ್ಷಿಣಾಮೂರ್ತಯೇ**

ಅರ್ಥ: ಬಾಲ್ಯ, ಯೌವನ, ಮುಪ್ಪುಗಳು, ಜಾಗ್ರತ್, ಸ್ವಪ್ನ, ನಿದ್ರಾದಿಗಳು ಮತ್ತು ಇತರ ಎಲ್ಲ ಅವಸ್ಥೆಗಳು ಬಂದು ಹೋದರೂ, ನಿತ್ಯವಾಗಿ ಉಳಿದುಕೊಂಡಿರುವ ಮತ್ತು ಒಳಗೇ ಸದಾ ಪ್ರಕಾಶಿಸುತ್ತಿರುವ ಆತ್ಮನನ್ನು ಯಾರು ತನ್ನ ಮಂಗಳವಾದ ಭದ್ರಮುದ್ರೆಯಿಂದ ಶಿಷ್ಯರಿಗೆ ಪ್ರಕಟಿಸುವನೋ ಅಂತಹ ಶ್ರೀಗುರುರೂಪಧಾರಿಯಾದ ಶ್ರೀದಕ್ಷಿಣಾಮೂರ್ತಿಗೆ ನಮಸ್ಕಾರ.

ಶ್ರೀ ಕಿಟ್ಟಿ ಮಾಸ್ಟರ್ ಅವರನ್ನು ಶ್ರೀದಕ್ಷಿಣಾಮೂರ್ತಿ ಯೆಂದು ಕರೆದರೆ ಅದರಲ್ಲಿ ಅತಿಶಯೋಕ್ತಿ ಏನಿದೆ?

ಭದ್ರಂ ಶುಭಂ ಮಂಗಳಂ



* * * * *

## ಛಲವಿರಲಿ ನಿಮ್ಮಲ್ಲಿ !

ಹಿಡಿದ ಕಾರ್ಯವನ್ನು ಬಿಡದೆ ಮಾಡುವ ಗುಣಕ್ಕೆ ಛಲವೆನ್ನುತ್ತಾರೆ. ಛಲವೆಂದರೆ ಹಟವಲ್ಲದೆ ಮತ್ತೇನು? ಈ ಗುಣ ಸಜ್ಜನರಿಗಿಂತಲೂ ದುರ್ಜನರಲ್ಲಿ ದುಷ್ಟರಲ್ಲಿ ಅಧಿಕ ಪ್ರಮಾಣದಲ್ಲಿರುವು ದನ್ನು ಕಾಣುತ್ತೇವೆ ನಾವು! ಆದರೆ ಸಮಾಜವೋ ರಾಷ್ಟ್ರವೋ ಪ್ರಗತಿಯ ಹಾದಿಯಲ್ಲಿ ಸಾಗಿ ಶಾಂತಿ-ಸಮೃದ್ಧಿಯನ್ನು ಅನುಭವಿಸುವಂತಾಗಬೇಕಾದರೆ ಈ ಛಲವೆಂಬ ಗುಣ ಸಜ್ಜನರಲ್ಲಿರ ಬೇಕು, ಪೂರ್ಣರೂಪದಲ್ಲಿರಬೇಕು. ಹಾಗೆಯೇ ಪ್ರಬಲ ಇಚ್ಛಾಶಕ್ತಿಯೂ ಕೂಡ. ಸತ್ಕಾರ್ಯ ವನ್ನು ಕೈಗೊಂಡು ಅದನ್ನು ನಿರ್ವಹಿಸುವ ಸಂದರ್ಭದಲ್ಲಿ ಎದುರಾಗುವ ಪ್ರತಿಕೂಲ ಪರಿಸ್ಥಿತಿ ಯನ್ನು ನಿವಾರಿಸಿಕೊಂಡು ಕಾರ್ಯವನ್ನು ಪೂರ್ಣಗೊಳಿಸಲೇಬೇಕು. ಇದಕ್ಕೆ ಬೇಕು ಮನಶ್ಶಕ್ತಿ ಅಥವಾ ಇಚ್ಛಾಶಕ್ತಿ. ಸ್ವಾಮಿ ವಿವೇಕಾನಂದರು ಹೇಳುತ್ತಾರೆ:

To succeed you must have tremendous perseverance, tremendous will. "I will drink the ocean," says the persevering soul, "at my will mountains will crumble up." Have that sort of energy, that sort of will, work hard, and you will reach the goal.

(I, 178)

ನೀವು ಯಶಸ್ವಿಗಳಾಗಬೇಕಿದ್ದರೆ ನಿಮ್ಮಲ್ಲಿ ಪ್ರಚಂಡ ಛಲವಿರಬೇಕಾಗುತ್ತದೆ, ಪ್ರಬಲ ಇಚ್ಛಾಶಕ್ತಿಯಿರಬೇಕಾಗುತ್ತದೆ. 'ನಾನು ವಾರಿಧಿಯನ್ನೇ ಹೀರಿಬಿಡುತ್ತೇನೆ' ಎನ್ನುತ್ತಾನೆ ಛಲವಾದಿ! 'ನನ್ನ ಇಚ್ಛಾಮಾತ್ರದಿಂದ ಪರ್ವತಗಳೇ ಪುಡಿಪುಡಿಯಾಗುವುವು!' ಎನ್ನುತ್ತಾನೆ ಅವನು. ನಿಮ್ಮಲ್ಲಿ ಈ ಬಗೆಯ ಛಲವಿರಲಿ. ನಿಮ್ಮಲ್ಲಿ ಈ ಬಗೆಯ ಇಚ್ಛಾಶಕ್ತಿಯಿರಲಿ. ಶ್ರಮವಹಿಸಿ ಕಾರ್ಯಮಗ್ನ ರಾಗಿರಿ. ನೀವು ಗುರಿ ಸೇರುವುದು ಖಂಡಿತ.

(ಸ್ವಾಮಿ ಪುರುಷೋತ್ತಮಾನಂದಜಿಯವರ **'ಪ್ರಯತ್ನವೇ ಪರಮೇಶ್ವರ'** ಪುಸ್ತಕದಿಂದ)

# ಅವರ ಗಿರಿಜನ ಒಲವು

✍ ಎಚ್. ಎನ್. ಸೋಮಸುಂದರಂ

"ಒಂಟಿ ಒಂಟಿ ಬಾಳು ಸಾಕ
ಒಗ್ಗಟ್ಟು ಆಗಬೇಕ!"

ಆದಿವಾಸಿ ಮಕ್ಕಳ ಹಾಡು ಹೀಗೆಯೇ ಸಾಗಿತ್ತು. ಅಂದು ಬೆಳಗ್ಗೆ ಸ್ವಲ್ಪ ಚಳಿಯಿತ್ತು, ತಣ್ಣನೆ ಗಾಳಿ ಬೀಸುತ್ತಿತ್ತು. ಮುನ್ನಾ ಧಿನವೇ ಬಿಳಿಗಿರಿರಂಗನ ಬೆಟ್ಟಕ್ಕೆ ಬಂದಿದ್ದ ಕಿಟ್ಟಿಮಾಸ್ಟರರು, ಇನ್ನು ಕೆಲವರು ಹಿರಿಯರು ಆಸಕ್ತಿಯಿಂದ ಹಾಡನ್ನು ಕೇಳುತ್ತಿದ್ದರು. ಹಾಡು ಮುಂದುವರಿಯಿತು.

"ಒಂಟಿ ಒಂಟಿ ಬಾಳು ಸಾಕ
ಒಗ್ಗಟ್ಟು ಆಗಬೇಕ
ಎಡದಾ ಕೈಯಲಿ ಮಚ್ಚಾ ಹಿಡಿದು
ಬಲದಾ ಕೈಯಲಿ ಕೊಡಲಿ ಹಿಡಿದು
ಬೀದಿಗೆ ಇಳಿಯಬೇಕ!..."

ನಾನು ನಿರೀಕ್ಷಿಸಿದಂತೆಯೇ ಆಯಿತು. ಕಿಟ್ಟಿಮಾಸ್ಟರರು ಒಮ್ಮೆ ಬೆಚ್ಚಿದಂತೆ ಕಂಡರೂ ನಂತರ ಕಿರುನಗೆ ಸೂಸಿ "ಹುಡುಗರು ಪರವಾಗಿಲ್ಲ" ಎಂಬಂತೆ ತಲೆಯಾಡಿಸಿದರು. ಅವರ ಮನೋಧರ್ಮವನ್ನು ಅರಿತಿದ್ದ ನಮಗೆ ಅವರು ಅಹಿಂಸಾತ್ಮಕ ಪ್ರತಿಭಟನೆಯನ್ನು ಮಾತ್ರ ಒಪ್ಪುವವರೆಂಬುದು ತಿಳಿದಿತ್ತು. ನಮ್ಮ ನೀತಿಯೂ ಅದೇ ಆಗಿತ್ತು. ಆದ್ದರಿಂದಲೇ ಸಾಕೇತರ ಹಾಡಿನಂತೆ ನಾವು ಸಮುದಾಯದೊಡನೆ ಬೀದಿಗಿಳಿದೆವಾದರೂ, ಮಚ್ಚು ಕೊಡಲಿಯ ಸಾಹಸ ಸಹವಾಸಗಳಿಗೆ ಎಂದೂ ಹೋಗಲಿಲ್ಲ. ಅನೇಕ ಧರಣಿ, ಮೆರವಣಿಗೆ ಸತ್ಯಾಗ್ರಹಗಳು ನಡೆದವು.

ಕಿಟ್ಟಿ ಮಾಸ್ಟರರಿಗೆ ಮತ್ತು ನಮ್ಮ ವೃತ್ತದ ಅನೇಕ ಹಿರಿಯರಿಗೆ ರಾಮಕೃಷ್ಣಾಶ್ರಮ ಹಿನ್ನೆಲೆಯ ಸಮಾಜ ಕಾರ್ಯಕರ್ತರು ಬಿಳಿಗಿರಿರಂಗನ ಬೆಟ್ಟದಂತಹ ಕಾಡಿನಲ್ಲಿ ಆದಿವಾಸಿ ಜನಾಂಗಗಳ ನಡುವೆ ಕೆಲಸ ಕೈಗೊಂಡಿದ್ದು ಒಂದು ಅಭಿಮಾನದ ವಿಚಾರವೇ ಆಗಿತ್ತು. ಆದ್ದರಿಂದಲೇ ನಮಗೆ ಅನೇಕರ ಬೆಂಬಲ ಸಹಾಯಹಸ್ತಗಳು ಸಾಕಷ್ಟು ಒದಗಿಬಂದವು.

ನಂತರದ ದಿನಗಳಲ್ಲಿ ಕಿಟ್ಟಿಮಾಸ್ಟರರು ಗಿರಿಜನ ಬಾಲಕ ಬಾಲಕಿಯರಿಗೆ ಕೆಲವು ಹಾಡುಗಳನ್ನು ಹೇಳಿಕೊಟ್ಟರು. ಬಿಳಿಗಿರಿರಂಗಸ್ವಾಮಿ ಹಿನ್ನೆಲೆಯಿಂದಲೋ ಏನೋ, ಮಕ್ಕಳಿಗೆ "ದೇವ ಬಂದಾನಮ್ಮ" ಎಂಬ ಹಾಡನ್ನು ವಿಶೇಷವಾಗಿ ಹೇಳಿಕೊಟ್ಟರು. ಒಮ್ಮೆ ಸ್ವಾಮಿ ಜಗದಾತ್ಮಾನಂದರು ಬಂದಿದ್ದಾಗ ಅವರು "ಜಗದೀ ಸಂತೆಯಲಲೆಯುವ ಮನುಜಾ, ನಿಲ್ಲೋ ಒಂದು ಕ್ಷಣ!" ಎಂಬ ಶ್ರೀಮಾತೆಯವರ ಹಾಡನ್ನು ಹೇಳಿಕೊಟ್ಟಿದ್ದರು. ಅದು ಕಿಟ್ಟಿ ಮಾಸ್ಟರರಿಗೆ ಬಹಳ ಪ್ರಿಯವಾಯಿತು. ಎಲ್ಲ ಮಕ್ಕಳಿಗೂ ಸಹ ತುಂಬಾ ಇಷ್ಟವೇ ಆಯಿತು. ಅದನ್ನು ಈಗಲೂ ತಪ್ಪದೆ ಹಾಡುತ್ತಾರೆ.

ಕಿಟ್ಟಿ ಮಾಸ್ಟರರು ಬಿಳಿಗಿರಿರಂಗನ ಬೆಟ್ಟಕ್ಕೆ ನೀಡಿದ ತಮ್ಮ ಅನೇಕ ಭೇಟಿಗಳಲ್ಲಿ ಗಿರಿಜನ ವಿದ್ಯಾಭ್ಯಾಸದ ಚರ್ಚೆಗಳಲ್ಲಿ ಪಾಲ್ಗೊಂಡಿದ್ದಾರೆ. ಪ್ರೌಢಶಾಲೆ ಅತ್ಯಂತ ಅವಶ್ಯವಾಗಿ ಬೇಕೆಂಬುದನ್ನು ಅವರು ಒಪ್ಪಿ, ಅದಕ್ಕೆ ನಿಮ್ಮಿಂದಲೆ ಯಾರಾದರೂ ಮುಖ್ಯೋಪಾಧ್ಯಾಯರಾಗಲಿ ಎಂದು ಸಲಹೆ ಮಾಡಿದರು. ಈ ಲೇಖಕನಿಗೆ ಬಿ.ಎಡ್. ಮಾಡಿಕೊಂಡು ಶಾಲಾ ವಿದ್ಯಾಭ್ಯಾಸದ ಹೊಣೆಗಾರಿಕೆ ತೆಗೆದುಕೊಳ್ಳಲು ಸಲಹೆ ಮಾಡಿದರು. ಕಾರಣಾಂತರಗಳಿಂದ ಆ ರೀತಿ ಮಾಡಲಾಗದಿದ್ದರೂ, ಗಿರಿಜನ ವಿದ್ಯಾಭ್ಯಾಸದಲ್ಲಿ ಆಳವಾಗಿ ಭಾಗವಹಿಸಿದೆ. ಈ ರೀತಿ ಗಿರಿಜನ ಮೊದಲ ಪೀಳಿಗೆ ಕಲಿಕೆಯಲ್ಲಿ ನಾವು ಪಾಲ್ಗೊಂಡೆವು.

ಆ ದಿನಗಳಲ್ಲಿ ಈಗಿರುವಂತೆ ಸುಸಜ್ಜಿತ ಶಾಲಾ ಕೊಠಡಿಗಳು, ಸಭಾಂಗಣಗಳು, ವಸತಿಸೌಕರ್ಯಗಳು ಇರಲಿಲ್ಲ. ಬೆಳಗ್ಗೆ ಕ್ಲಾಸ್ ರೂಂ ಆಗಿದ್ದುದನ್ನು ರಾತ್ರಿ ವಸತಿ ಗೃಹವಾಗಿ ಉಪಯೋಗಿಸುತ್ತಿದ್ದೆವು. ಉಪಾಧ್ಯಾಯರ ಸಂಖ್ಯೆಯೂ ಕಡಿಮೆಯಿದ್ದಿತು. ಅಂತಹ ಒಂದು

ಸಭೆಯಲ್ಲಿ ಗಿರಿಜನ ಬಾಲಕ ಬಾಲಕಿಯರನ್ನು ಉದ್ದೇಶಿಸಿ ಮಾತನಾಡುತ್ತಾ, ಕಿಟ್ಟಿ ಮಾಸ್ತರು "ಎಲೆ ಚಿಕ್ಕದಾದ ರೇನು? ಬಡಿಸುವವರು ನಮ್ಮವರಾದರೆ" ಎಂಬ ಗಾದೆ ಯನ್ನು ಚೆನ್ನಾಗಿ ವಿವರಿಸಿದರು. "ಈಗ ನಿಮಗೆ ಅನೇಕ ಸೌಕರ್ಯಗಳು ಇಲ್ಲದಿರಬಹುದು; ಆದರೇನು? ಬಡಿಸು ವವರು ನಿಮ್ಮವರು! ಸದಾಕಾಲವೂ ನಿಮ್ಮ ಪುರೋಭಿ ವೃದ್ಧಿಯ ವಿದ್ಯಾಭ್ಯಾಸದ ಬಗ್ಗೆ ನಿರತರಾಗಿರುವವರು. ಆದ್ದರಿಂದ ನಿಮಗೆ ಒಳ್ಳೆಯ ಮಾರ್ಗದರ್ಶನ, ಸೇವೆ ಖಂಡಿತವಾಗಿ ಸಿಗುವುದು. ಈ ಸದವಕಾಶದ ಉಪಯೋಗ ಪಡೆಯಿರಿ!" ಎಂದು ಸಂದೇಶವಿತ್ತರು.

ಅವರ ಭವಿಷ್ಯ ಸುಳ್ಳಾಗಲಿಲ್ಲ, ನಮ್ಮ ಗಿರಿಜನ ಶಾಲೆ ಅಂತರಶಾಲಾ ಕ್ರೀಡಾಪ್ರಶಸ್ತಿಗಳನ್ನು ಗಳಿಸಿರುವುದು ಮಾತ್ರ ವಲ್ಲದೆ, ಶಾಲೆಯಲ್ಲಿ ಶೇ. 99 ಫಲಿತಾಂಶದ ಯಶಸ್ಸನ್ನು ಗಳಿಸಿದೆ (2005-2006). ವಿದ್ಯಾಭ್ಯಾಸಕ್ಕೆ ಸೌಕರ್ಯಗಳೂ ಚೆನ್ನಾಗಿವೆ.

ಗ್ರಾಮೀಣ ಹಾಗೂ ಗಿರಿಜನ ಪ್ರದೇಶದ ಬಾಲಕ ಬಾಲಕಿಯರಲ್ಲಿ, ಯುವಜನತೆಯಲ್ಲಿ ಓದುವ ಬರೆಯುವ ಅಭ್ಯಾಸ ರೂಢಿಸಲು, ನಮ್ಮ ದೇಶದ ಭವ್ಯ ಪರಂಪರೆಯ ಇತಿಹಾಸದಲ್ಲಿ ಅಭಿರುಚಿ ಆಸಕ್ತಿಗಳನ್ನು ಮೂಡಿಸಲು ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರವು ಯಳಂದೂರು, ಕೊಳ್ಳೆಗಾಲ, ಚಾಮರಾಜನಗರ ಹಾಗೂ ಟಿ. ನರಸಿಪುರ ತಾಲ್ಲೂಕುಗಳಲ್ಲಿ ಎಲ್ಲೆಡೆ ಪ್ರೌಢಶಾಲೆ ಮತ್ತು ಒಂದೆಡೆ ಕಾಲೇಜು ವಿದ್ಯಾರ್ಥಿಗಳನ್ನು ಸೇರಿಸಿ ಒಂದು ಪ್ರಬಂಧಸ್ಪರ್ಧೆಯನ್ನು ಎಂಬತ್ತರ ದಶಕದಿಂದಲೇ ನಡೆಸುತ್ತಿದೆ. ಇದರಲ್ಲಿ ಭಾಗವಹಿಸಲು ಮಹದೇಶ್ವರ ಬೆಟ್ಟದ ದುರ್ಗಮ ಕಾಡುಪ್ರದೇಶಗಳಿಂದಲೂ ಶಾಲಾ ವಿದ್ಯಾರ್ಥಿಗಳು ಇಪ್ಪತ್ತು ರೂಪಾಯಿ ಬಸ್ ಚಾರ್ಜ್ ಖರ್ಚು ಮಾಡಿಕೊಂಡು ಭಾಗವಹಿಸುವ ವಿಚಾರ ಕೇಳಿ ಅತ್ಯಂತ ಸಂತೋಷಪಟ್ಟವರೆಂದರೆ ಕಿಟ್ಟಿ ಮಾಸ್ತರರು! ಇದರ ಅನೇಕ ಬಹುಮಾನ ವಿನಿಯೋಗ ಸಮಾರಂಭ ಗಳಲ್ಲಿ ಅವರು ಭಾಗವಹಿಸಿದ್ದಾರೆ. ತಮ್ಮ ನುಡಿಗಳಲ್ಲಿ, ಸಂವಾದಗಳಲ್ಲಿ ಅವರು "ಗಿರಿಜನ ಅಭಿವೃದ್ಧಿಕಾರ್ಯ ಬೇಕಾದಷ್ಟು ನಡೆದಿದೆ; ಅದನ್ನು ನೋಡಿಯೇ ತಿಳಿಯ ಬೇಕು" ಎಂದು ಹೇಳಿದ್ದಾರೆ.

ಒಮ್ಮೆ ಒಂದು ಮೋಜಿನ ಪ್ರಸಂಗ ನಡೆಯಿತು. ತಮ್ಮ ಒಂದು ಬೆಟ್ಟದ ಯಾತ್ರೆಯಲ್ಲಿ ಕಿಟ್ಟಿ ಮಾಸ್ತರರು ಒಂದೆರಡು ಹೇರಳೆಕಾಯಿ ತಂದರು, ಅದನ್ನು ಗೊಜ್ಜು ಮಾಡುತ್ತೇನೆ ಎಂದು. ಅದಕ್ಕೆ ಅವರೊಡನೆ ಬಂದಿದ್ದ ರಾಮಚಂದ್ರರವರು "ಅದರಲ್ಲೇನಿದೆ? ಎಷ್ಟು ಉಪ್ಪು, ಹುಳಿ ಹಾಕಿದರೂ, ಹೇಗೆ ಮಾಡಿದರೂ ಗೊಜ್ಜು ತಯಾರಾಗುತ್ತದೆ, ಸಿಲ್ಲಿ" ಎಂದು ಹಾಸ್ಯಮಾಡಿದರು. ಅಂತೂ ನಾವು ಒಲೆ, ಪಾತ್ರೆಗಳನ್ನು ಸಿದ್ಧಪಡಿಸಿಕೊಟ್ಟೆವು. ಅಂದು ಬಹಳ ಒಳ್ಳೆಯ ಗೊಜ್ಜನ್ನೇ ಕಿಟ್ಟಿಮಾಸ್ತರರು ತಯಾರು ಮಾಡಿಯೇ ಮಾಡಿದರು!

ನಾವು ಕೆಲವರು ಬಿಳಿರಂಗನ ಬೆಟ್ಟದಲ್ಲಿ ಸೋಲಿಗ ರೊಡನೆ ಕೆಲಸಮಾಡುತ್ತಿದ್ದುದು ಕಿಟ್ಟಿಮಾಸ್ತರರಿಗೆ ಬಹಳ ಸಂತೋಷವಾಯಿತೆಂದು ಹೇಳಿದೆವಷ್ಟೆ. ಕಿಟ್ಟಿ ಮಾಸ್ತರರು ನನಗೆ ಈ ಹಿನ್ನೆಲೆಯಲ್ಲಿ ದಿನಚರಿ ಬರೆಯಲು ಸಲಹೆ ಮಾಡಿದರು. ನಾನು ಚೆನ್ನಾಗಿ ಬರೆದೆನೆಂದು ಹೇಳಲಾರೆ, ಆದರೆ ನಾನು ಗುರುತುಮಾಡಿಕೊಂಡ ಸ್ವಲ್ಪವೇ ವಿಷಯ ಗಳು, ಮಾಹಿತಿಗಳು ನನಗೆ ಯಾವಾಗಲೂ ಉಪಯುಕ್ತ ವಾಗಿವೆ.

ಅನೇಕ ಸಂವಾದ ಸಂಭಾಷಣೆಗಳಲ್ಲಿ ಕಿಟ್ಟಿ ಮಾಸ್ತರರು ತಮ್ಮ ವಿಚಾರಧಾರೆಯನ್ನು ಹೀಗೆ ವ್ಯಕ್ತಪಡಿಸುತ್ತಾರೆ:

"ಎಲ್ಲ ಸಮಸ್ಯೆಗಳಿಗೂ ಜನಸಂಖ್ಯಾಸ್ಫೋಟವೇ ಕಾರಣ. ಹಾಗೆಯೇ ಗಿರಿಜನರಿಗೂ ಆಗಿದೆ. ಆದರೆ ಇದು ಬರಿಯ ಗಿರಿಜನಸಂಖ್ಯಾಸ್ಫೋಟ ಮಾತ್ರವಲ್ಲ; ಇತರೆಡೆ ಆಗುವ ಹೆಚ್ಚಳವೂ ಸೇರಿದೆ. ಇದರಿಂದ ಅರಣ್ಯದ ಮೇಲೆ ಒತ್ತಡ ಹೆಚ್ಚಿ, ಅರಣ್ಯವಾಸಿಗಳ ಜೀವನ ದುರ್ಭರ ವಾಗಿರಲು ಸಾಕು. ಬೇರೆ ಅವಕಾಶಗಳಿಗೂ ಸ್ಪರ್ಧೆ ಹೆಚ್ಚಿ ಮೊದಲೇ ಮೂಲೆಗುಂಪಾಗಿರುವವರು ಇನ್ನೂ ಹೆಚ್ಚಿಗೆ ತಳ್ಳಲ್ಪಡುತ್ತಿದ್ದಾರೆ.

"ಗಿರಿಜನ ಮಕ್ಕಳು ಎಷ್ಟು ಸಂತೋಷದಿಂದ ಸೌದೆ ತರುತ್ತಾರೆ! ಇನ್ನಿತರ ಕೆಲಸಗಳನ್ನು ಮಾಡುತ್ತಾರೆ! ಅದು ಅವರಿಗೆ ಹೊರೆ ಎಂದೆನಿಸುವುದಿಲ್ಲ. ಪ್ರಕೃತಿಯೊಡನಿದ್ದು ಜೀವನೋತ್ಸಾಹದಿಂದ ಕೂಡಿರುವ ಈ ಎಳೆಯರನ್ನು ನೋಡಿದರೆ ಸಂತೋಷವಾಗುವುದಷ್ಟೇ ಅಲ್ಲ, ಭರವಸೆ ಮೂಡುತ್ತದೆ.

"ಗಿರಿಜನರ ಹಂಚಿಕೊಂಡು ಬಾಳುವ ನೀತಿ ನಿಜಕ್ಕೂ ಶ್ಲಾಘನೀಯ. ಸಿಖ್ ಜನಾಂಗದಲ್ಲಿಯೂ 'ಹಂಚಿಕೋ' ಎಂಬ ಸಂದೇಶವಿದೆ. ಇದು ಆದಿವಾಸಿ ಜನಾಂಗಗಳಲ್ಲಿ ಅನಾದಿಕಾಲದಿಂದಲೂ ಬಂದಿರುವುದು ಮಹತ್ತ್ವದ ಸಂಗತಿ."

ಕಿಟ್ಟಿಮಾಸ್ತರರು ಬೆಟ್ಟಕ್ಕೆ ಬಂದುಹೋಗುತ್ತಿದ್ದು ಆಸಕ್ತಿ ವಹಿಸಿದ ಕಾರಣದಿಂದಾಗಿ ಅವರ ಸಹೋದರ ಡಾ. ಸುಬ್ಬರಾವ್ (ಅವರ ನಿಕಟವರ್ತಿಗಳಿಗೆ 'ಪಾಪು')ರವರು ಇಲ್ಲಿನ ಕಾರ್ಯಕ್ಷೇತ್ರ ಪ್ರವೇಶಿಸುವಂತೆ ಆಯಿತು. ಕೃಷ್ಣ-ಬಲರಾಮರು ಬಂದಂತಾಯಿತು! ಸುಬ್ಬರಾವ್ ಮಧ್ಯಪ್ರದೇಶದಲ್ಲಿ ಡಕಾಯಿತರನ್ನು ಪರಿವರ್ತನೆ ಮಾಡಿದವರು, ಚಂಬಲ್ ಖ್ಯಾತಿಯವರು. ಈಗ ರಾಷ್ಟ್ರೀಯ ಭಾವೈಕ್ಯತೆಗಾಗಿ ದಿವ್ಯವಾದ ಬೃಹತ್ ಯುವಜನ ಶಿಬಿರಗಳನ್ನು ದೇಶದೆಲ್ಲೆಡೆ ಸಂಘಟಿಸುತ್ತಿದ್ದಾರೆ. ಅಲ್ಲದೆ ವಿಶ್ವದೆಲ್ಲೆಡೆ ಸಂಚರಿಸಿ ಯುವಜನಾಂಗವನ್ನು ಜಾಗೃತರನ್ನಾಗಿ ಮಾಡುತ್ತಿದ್ದಾರೆ. ಇಂತಹ ಮಾರ್ಗದರ್ಶನ, ಸಂಪರ್ಕ ದೊರಕಿದ ಕಾರಣದಿಂದಾಗಿ ಬಿಳಿಗಿರಿರಂಗನ ಬೆಟ್ಟದ ಸಂಸ್ಥೆಯಲ್ಲಿಯೂ ಅದರ ಸಹಸಂಸ್ಥೆಗಳಲ್ಲಿಯೂ ಶಿಬಿರಗಳು, ತರಬೇತಿ ಚರ್ಚೆಗಳು ನಡೆಯುವಂತೆ ಆಗಿದೆ.

ಬೆಂಗಳೂರಿನ ಸ್ವಾಮಿ ವಿವೇಕಾನಂದ ವಿದ್ಯಾಶಾಲೆಯು ಬಿಳಿಗಿರಿರಂಗನಬೆಟ್ಟದ ಶಾಲೆಯೊಡನೆ ಸೇರಿ ಮಕ್ಕಳ ಶಿಕ್ಷಣಕ್ಕಾಗಿ ಶ್ರಮಿಸಿದೆ. ಶಾಲೆಯ ಮುಖ್ಯೋಪಾಧ್ಯಾಯ ಶಂಕರ್, ಈಗ ಸ್ಮರಣೆಯಾಗಿರುವ ರಜನಿ, ಇನ್ನಿತರ ಶಿಕ್ಷಕರು ಬಂದು ಈ ಕಾರ್ಯಗಳಲ್ಲಿ ತಮ್ಮ ಅಮೂಲ್ಯ ಅನುಭವವನ್ನು ಹಂಚಿಕೊಂಡಿದ್ದಾರೆ. ಹಾಗೆಯೇ ಅನೇಕ ತರಬೇತಿಗಳನ್ನು ಎರಡು ಶಾಲೆಯ ಶಿಕ್ಷಕರಿಗೂ ಒಟ್ಟಿಗೆ ಏರ್ಪಡಿಸಿ ಪರಸ್ಪರ ಅಭಿವೃದ್ಧಿಯಲ್ಲಿ ಪಾಲ್ಗೊಂಡಿದ್ದಾರೆ.

ಇಂತಹ ಕಳಕಳಿಗೆ ಸ್ಫೂರ್ತಿಯ ಸೆಲೆಯಾದ ಕಿಟ್ಟಿ ಮಾಸ್ತರರು ಇನ್ನೂ ಅನೇಕಬಾರಿ ಗಿರಿಜನ ಪ್ರದೇಶಕ್ಕೆ ಬಂದು ಹೋಗುವಂತಾಗಲಿ, ಅವರ ಆರೋಗ್ಯ ಯಾವಾಗಲೂ ಚೆನ್ನಾಗಿರಲಿ ಎಂಬುದೇ ನಮ್ಮೆಲ್ಲರ ಹಾರೈಕೆ.



* * * * *

## ಭಕ್ತಿ-ಪ್ರೇಮ

ಎದೆಯಲಿ ಪ್ರೇಮ ಮನದಲಿ ನಾಮ
ಇವು ಯಾರಲಿ ಇವೆಯೊ।
ನಿಜಕು ಅವನು ಈ ಅವನಿಯನು
ಬೆಳಗುತಿರುವ ಸಂತ — ಕಬೀರಾ॥

ಪ್ರೇಮವೆ ಇಲ್ಲದ ಮನುಜ
ಪ್ರಾಣಿಗೆ ಸಮ ತಿಳಿಯೋ।
ಗಾಳಿಯಾಡಿದರು ಪ್ರಾಣವಿರದ
ಕಮ್ಮಾರನ ತಿದಿಯೋ — ಕಬೀರಾ॥

ಪ್ರೇಮ-ಪ್ರೀತಿಗಳ ಪೂರ್ಣರೂಪ
ಭಕ್ತಿಯೆಂದೆನಿಸುವುದು।
ಇಂಥ ದಿವ್ಯ ಭಕ್ತಿಯು ದೊರಕುವುದು
ಸದ್ಗುರು ಕೃಪೆಯಿಂದ — ಕಬೀರಾ॥

**- ಸ್ವಾಮಿ ಪುರುಷೋತ್ತಮಾನಂದ**

# ಶಾಲೆಯ ಅಭಿವೃದ್ಧಿಯ ರೂವಾರಿ ಶ್ರೀ ಕಿಟ್ಟಿ ಮಾಸ್ತರರು

✍ **ಹೆಚ್. ವಿ. ಶಂಕರ್**, ಮುಖ್ಯೋಪಾಧ್ಯಾಯರು
ಸ್ವಾಮಿ ವಿವೇಕಾನಂದ ಪ್ರೌಢಶಾಲೆ, ಬೆಂಗಳೂರು-50

**ನಾ**ನು ಕಿಟ್ಟಿಮೇಷ್ಟ್ರರ ಸಂಪರ್ಕ ಪಡೆದಿದ್ದು 1962ರಲ್ಲಿ ನಾನು ಬಾಲಕ ಸಂಘಕ್ಕೆ ಸೇರಿದಾಗ, ಅಲ್ಲಿ ಅವರು ನಮಗೆ ಅನೇಕ ಹಾಡುಗಳನ್ನು ಹೇಳಿಕೊಟ್ಟಿದ್ದರು. ಅದರಲ್ಲೂ ವಿಶೇಷವಾಗಿ ಮುಖ್ಯ ಹಾಡುಗಳೆಂದರೆ, 'ಗಾಯತಿ ವನಮಾಲಿ', 'ತುರುಖುಕೋ ಹಮನೇ' 'ರಾಮಕೋದಂಡ ರಾಮ' ಮುಂತಾದವು. ಅವರ ಧ್ವನಿಯ ಮಧುರತೆ ಹಾಗೂ ಗಟ್ಟಿತನ ಎಲ್ಲರನ್ನೂ ಆಕರ್ಷಿಸುತ್ತಿತ್ತು. ಅದರೊಂದಿಗೆ ಅವರ ಸರಳ ನೇರ ನಡೆನುಡಿ ಎಲ್ಲರಿಗೂ ಸಂತೋಷ ತರುತ್ತಿತ್ತು.

1982ರಲ್ಲಿ ಅವರು ತಮ್ಮ ಸರ್ಕಾರಿ ಸೇವೆಯಿಂದ ಸ್ವಯಂ ನಿವೃತ್ತಿ ಪಡೆದು ಬೆಂಗಳೂರಿಗೆ ಬಂದಾಗ ನಾವೆಲ್ಲರೂ ಅವರನ್ನು ನಮ್ಮ pole star ಆಗಿ ಇರಲು ನಮ್ಮ ಶಾಲೆಯ ಕಾರ್ಯದರ್ಶಿಯಾಗುವಂತೆ ಅವರನ್ನು ಕೇಳಿಕೊಂಡೆವು. ಆಗ ನಮ್ಮ ಶಾಲೆಗೆ ಸ್ವಂತ ಕಟ್ಟಡ ವಿರಲಿಲ್ಲ; ಹಣಕಾಸಿನ ಪರಿಸ್ಥಿತಿ ಹದಗೆಟ್ಟಿತ್ತು. ಆದರೆ ಒಂದು ನಿವೇಶನ ಸರ್ಕಾರದ ವತಿಯಿಂದ ಮಂಜೂರಾಗಿತ್ತು. ಅವರು ಎಲ್ಲಾ ಕೆಲಸ ನೀವೇ ಮಾಡಬೇಕು ನಾನು ಕೇವಲ ಕಾರ್ಯದರ್ಶಿಯಾಗಿರುತ್ತೇನೆ ಎಂದರು. ಅದಕ್ಕೆ ನಾವು ಒಪ್ಪಿ ಅವರನ್ನು ನಮ್ಮ ಶಾಲೆಯ ಕಾರ್ಯದರ್ಶಿಯಾಗಿ ಆಯ್ಕೆ ಮಾಡಿದೆವು.

ಅಂದಿನಿಂದ ಅವರ ನಿಕಟ ಸಂಪರ್ಕ ಇನ್ನಷ್ಟು ಹೆಚ್ಚಾಯಿತು. ಅವರು ಬಂದ ಹೊಸದರಲ್ಲಿ ಮಾಡಿದ ಕೆಲಸ ಶಾಲೆಗೆ ಆಜೀವ ಸದಸ್ಯರು ಹಾಗೂ ದಾನಿ ಸದಸ್ಯರನ್ನು ಹೆಚ್ಚಿಸುವುದು. ಅದುವರೆಗೆ ಕೇವಲ 10-15 ಸದಸ್ಯರಿದ್ದ ಸಂಸ್ಥೆಯ ಸದಸ್ಯರ ಸಂಖ್ಯೆ 100ನ್ನು ದಾಟಿತು. ಇದರಿಂದ ಸಾಕಷ್ಟು ಆದಾಯವೂ ಸಂಸ್ಥೆಗೆ ಬಂದಿತು. ಮುಂದಿನ ಕೆಲಸ ಶಾಲೆಗೆ ಒಂದು ಸ್ವಂತ ಕಟ್ಟಡ ನಿರ್ಮಾಣಮಾಡುವುದು. ಆಗ ನಮ್ಮ ಸಂಸ್ಥೆಯ ಖಾತೆಯಲ್ಲಿ ನಿವೇಶನಕ್ಕೆ ದುಡ್ಡು ಕೊಟ್ಟನಂತರ ಉಳಿದ ಸುಮಾರು 20,000 ರೂ. ಗಳಿದ್ದವು. ಶ್ರೀ ಕಿಟ್ಟಿಮೇಷ್ಟ್ರು ಈ ಹಣ ಬ್ಯಾಂಕಿನಲ್ಲಿ ಸುಮ್ಮನೆ ಏಕಿರಬೇಕು, ಕಟ್ಟಡದ ಕೆಲಸ ಸ್ವಲ್ಪ, ಸ್ವಲ್ಪವಾದರೂ ಮಾಡೋಣ ಎಂದರು. ಅದರಂತೆ ಮೊದಲು ಸಿಮೆಂಟ್ ಕೊಂಡುಕೊಂಡೆವು. ಶ್ರೀ ಕಿಟ್ಟಿ ಮಾಸ್ಟರ್‌ರ ಸಂಬಂಧಿಯಾದ ಶ್ರೀ ರುದ್ರ ವಿ. ಪಂಚ್ ಅವರನ್ನು ಕಟ್ಟಡದ ಕೆಲಸವನ್ನು ಮೇಲ್ವಿಚಾರಣೆ ಮಾಡಲು ಅವರು ಒಪ್ಪಿಸಿದರು. ಶ್ರೀ ರುದ್ರ ಅವರು ಇದುವರೆಗೂ ನಮ್ಮ ಶಾಲಾ ಕಟ್ಟಡ ನಿರ್ಮಾಣದ ಎಲ್ಲಾ ಜವಾಬ್ದಾರಿ ತೆಗೆದುಕೊಂಡು ಯಾವುದೇ ಸಂಭಾವನೆಯಿಲ್ಲದೇ ನಮ್ಮೆಲ್ಲಾ ಕೆಲಸಕಾರ್ಯಗಳನ್ನು ಮಾಡಿಕೊಟ್ಟಿರುತ್ತಾರೆ. ಅವರಿಗೆ ನಾವು ಆಭಾರಿಗಳು. ನಂತರ ಶಾಲೆಯ ಬಗ್ಗೆ ಒಂದು ಮನವಿ ತಯಾರು ಮಾಡಿ ಅನೇಕ ಮಿತ್ರರಿಗೆ ಅದನ್ನು ಕಳಿಸಿಕೊಟ್ಟೆವು. ಅದರಲ್ಲಿ ಮೊದಲು ನಮಗೆ ಸಹಾಯ ಮಾಡಿದವರೆಂದರೆ ಶ್ರೀ ನೀತು ಭಾಯಿ ಪಟೇಲ್ ಹಾಗೂ ನನ್ನ ಷಡ್ಡಕರಾದ ಶಿವಮೊಗ್ಗದ ಶ್ರೀ ಗೋಪಾಲ ದಿವೇಕರ್ ಮತ್ತು ನಮ್ಮ ಭಾವಮೈದುನ ಶ್ರೀ ಸುಧಾಕರ್ ಜೋಷಿಯವರು. ಕಿಟ್ಟಿಮೇಷ್ಟ್ರು ಹಾಗೂ ನಾನು ಶಿವಮೊಗ್ಗ ಪ್ರವಾಸ ಮಾಡಿ ಅಲ್ಲಿ ಭಜನೆ ಮಾಡಿ ಹಾಗೂ ಅಲ್ಲಿ ಶ್ರೀ ದಿವೇಕರ್ ಅವರ ಪಿಯರ್ ಲೈಟ್ ಲೈನರ್ಸ್ ಮತ್ತು ಅದರ ಸಂಬಂಧಿತ ಘಟಕಗಳಿಗೆ ಭೇಟಿಕೊಟ್ಟು ಸಾಕಷ್ಟು ಧನ ಸಂಗ್ರಹ ಮಾಡಿದೆವು. ಅದರಿಂದ ನಮ್ಮ ಶಾಲಾ ಕಟ್ಟಡದ ಕೆಲಸ ಬಿರುಸಾಗಿ ನಡೆಯಲು ಸಾಧ್ಯವಾಯಿತು. ಆಗಸ್ಟ್ 6, 1986 ರಂದು ಆರು ಕೊಠಡಿಗಳು ಪೂರ್ಣಗೊಂಡು ನಾವು ಬಾಡಿಗೆ ಕಟ್ಟಡದಿಂದ ಸ್ವಂತ ಕಟ್ಟಡಕ್ಕೆ ಬರುವಂತಾಯಿತು. ಇದರಲ್ಲಿ ಪ್ರಮುಖ ಪಾತ್ರ ಶ್ರೀ ಕಿಟ್ಟಿಮೇಷ್ಟ್ರರದೇ ಎಂದು ಹೇಳಿದರೇ

ಖಂಡಿತ ತಪ್ಪಾಗಲಾರದು. ಮುಂದೆ ಈ ಕಟ್ಟಡದ ಸಮರ್ಪಣಾ ಸಮಾರಂಭವನ್ನು ಪೂಜ್ಯ ಶ್ರೀ ಸ್ವಾಮಿ ಪುರುಷೋತ್ತಮಾನಂದಜೀಯವರು ಶ್ರೀ ಅದೀಪ್ ಚೌಧರಿ, ಆಗಿನ ಶಿಕ್ಷಣ ಇಲಾಖೆ ಕಾರ್ಯದರ್ಶಿಗಳು ಅವರ ನೇತೃತ್ವದಲ್ಲಿ ನಡೆಸಿಕೊಟ್ಟರು.

ಅದಾದ ನಂತರ ಶ್ರೀ ಕಿಟ್ಟಿ ಮಾಸ್ಟರ್ ನಾಲ್ಕು ಬಾರಿ ಅಮೇರಿಕಾ ಪ್ರವಾಸ ಮಾಡಿದರು. 1987, 88, 89 ಹಾಗೂ 93 ರಲ್ಲಿ. 1993ರಲ್ಲಿ ಸ್ವಾಮಿ ವಿವೇಕಾನಂದರ ಐತಿಹಾಸಿಕ ಚಿಕಾಗೋ ವಿಶ್ವಧರ್ಮ ಸಮ್ಮೇಳನದ ಶತಮಾನೋತ್ಸವ. ಈ ಐತಿಹಾಸಿಕ ಉತ್ಸವದಲ್ಲಿ ನನಗೆ ಪಾಲ್ಗೊಳ್ಳಲು ಅವಕಾಶ ದೊರೆತಿದ್ದು ಶ್ರೀ ಕಿಟ್ಟಿ ಮಾಸ್ಟರ್ ರಿಂದ. ಅವರ ಈ ಅಮೇರಿಕಾ ಪ್ರವಾಸಗಳಿಂದ ಡಾಲರ್ ಗಳಲ್ಲಿ ನಮ್ಮ ಶಾಲೆಗೆ ಹಣ ಒದಗಿದ್ದು, ಇದರಿಂದ ಶಾಲೆ ಯಲ್ಲಿ ಕಟ್ಟಡದ ಕೆಲಸ ಪೂರ್ಣವಾಗುವುದು ಮಾತ್ರ ವಲ್ಲದೇ, ವಿದ್ಯಾರ್ಥಿಗಳಿಗೆ ಸಹಾಯಧನ, ಮಧ್ಯಾಹ್ನದ ಊಟದ ಅನ್ನಪೂರ್ಣ ಯೋಜನೆ, ಮುಂತಾದ ಇತರ ಪೂರಕ ಕೆಲಸಗಳಿಗೂ ಧನಸಹಾಯ ಒದಗಿಬಂದಿದೆ. ಇನ್ನೂ ಆಗಾಗ ಕಿಟ್ಟಿಮಾಸ್ಟರ್‌ರ ಪರಿಚಯದ ಆಧಾರದ ಮೇಲೆ ಧನಸಹಾಯ ಒದಗುತ್ತಾ ಬಂದಿದೆ.

## ಕಿಟ್ಟಿ ಮಾಸ್ಟರ್‌ರೊಡನೆ ಅಮೇರಿಕಾ ಪ್ರವಾಸದ ಸವಿನೆನಪುಗಳು

ಸ್ವಾಮಿ ವಿವೇಕಾನಂದರು 1893ರ ಸೆಪ್ಟಂಬರ್ 11ರಂದು ವಿಶ್ವಧರ್ಮ ಸಮ್ಮೇಳನದಲ್ಲಿ ಐತಿಹಾಸಿಕ ಚಿಕಾಗೋ ಉಪನ್ಯಾಸ ಮಾಡಿ ನೂರು ವರ್ಷಗಳು ಕಳೆದು ಅದರ ಸ್ಮರಣಾರ್ಥದ ಸಮ್ಮೇಳನ ಅದೇ ಚಿಕಾಗೋದಲ್ಲಿ ನಡೆಯುವುದಿತ್ತು. ಈ ಸ್ಮರಣೀಯ ಸಂದರ್ಭದಲ್ಲಿ ನಾನು ಪಾಲ್ಗೊಳ್ಳುವೆನೆಂಬುದನ್ನು ಕನಸಿನಲ್ಲೂ ಕಂಡಿರಲಿಲ್ಲ. ಆದರೆ ಈ ಕನಸು ನನಸಾಗುವಂತೆ ಮಾಡಿದವರೂ ಪೂಜ್ಯ ಶ್ರೀ ಕಿಟ್ಟಿ ಮೇಷ್ಟು. ಅವರು ಈ ಹಿಂದೆಯೇ ಮೂರು ಬಾರಿ 1987, 88 ಹಾಗೂ 89ರಲ್ಲಿ ಅಮೇರಿಕಾ ಪ್ರವಾಸ ಮಾಡಿ ಅಲ್ಲಿ ಭಜನಾ ಕಾರ್ಯಕ್ರಮಗಳನ್ನು ನಡೆಸಿ ಶಾಲೆಯ ಕಟ್ಟಡ ನಿಧಿಗೆ ಸಾಕಷ್ಟು ನಿಧಿ ಸಂಗ್ರಹಿಸಿದ್ದರು. ಅವರು 1989ರಲ್ಲಿ ಅಮೇರಿಕಾ ಪ್ರವಾಸ ಮುಗಿಸಿ ಬಂದಾಗಲೇ ಮುಂದಿನ ಪ್ರವಾಸದಲ್ಲಿ ನನ್ನನ್ನು ಕರೆದೊಯ್ಯುವುದಾಗಿ ಘೋಷಿಸಿದ್ದರು. ಇದಕ್ಕೆ ಕಾರಣ ಎಂದರೆ ನನಗೆ ಇರುವ ಅಲ್ಪ ಸ್ವಲ್ಪ ತಬಲ ಜ್ಞಾನ ಮತ್ತು ಶಾಲಾ ಮುಖ್ಯೋಪಾಧ್ಯಾಯರಾಗಿ ನೇರವಾಗಿ ಶಾಲೆಯ ಪ್ರತಿನಿಧಿಯಾಗಿ ಹೋಗುವುದು. ಆದರೆ 1990ರಲ್ಲೇ ನಡೆಯಬೇಕಾಗಿದ್ದ ಪ್ರವಾಸ 1993ಕ್ಕೆ ಮುಂದಕ್ಕೆ ಹೋಯಿತು. ಏನಾದರೂ ಈ ಪ್ರವಾಸದಲ್ಲಿ ನಾನು ಕಿಟ್ಟಿಮಾಸ್ಟರನ್ನು ಸಮೀಪದಿಂದ ಅರಿತುಕೊಳ್ಳಲು ಸಹಾಯ ಮಾಡಿತೆನ್ನುವುದರಲ್ಲಿ ಸಂದೇಹವಿಲ್ಲ.

ನಾವು 29ನೇ ಜುಲೈ 1993ರಂದು ಬೆಂಗಳೂರನ್ನು ಬಿಟ್ಟು ಮುಂಬೈ, ಫ್ರಾಂಕ್‌ಫರ್ಟ್ ಮೂಲಕ ಡೆಲ್ಟಾ ಏರ್‌ಲೈನ್ಸ್, ವಿಮಾನದಲ್ಲಿ ನ್ಯೂಯಾರ್ಕ್ ತಲುಪಿದೆವು. ನಮ್ಮ ಪ್ರವಾಸದ ಎಲ್ಲಾ ವಿವರಗಳೂ ನಾವು ಎಲ್ಲೆಲ್ಲಿ ಯಾವ ಯಾವ ದಿನಾಂಕ ಇರಬೇಕೆಂಬ ವೇಳಾಪಟ್ಟಿಯೂ ನಾವು ಇಲ್ಲಿಂದ ಹೊರಡುವ ಮುಂಚೆಯೇ ಅಮೇರಿಕಾದ ಮಿತ್ರರಾದ ಪ್ರೊಫೆಸರ್ ಎಂ. ಕೆ. ಶಿವಸ್ವಾಮಿ, ಡಾ॥ ಕಾರ್ಟೆ ಹಾಗೂ ರಮಣಿ ರಾಮಕೃಷ್ಣನ್ ಅವರು ತಯಾರು ಮಾಡಿ ಕಳುಹಿಸಿದ್ದರು. ಅದರಂತೆ ನಾವು ಮೊದಲು ನ್ಯೂಯಾರ್ಕ್ ತಲುಪಿದೆವು. ಅಲ್ಲಿ ಶ್ರೀ ಎಂ. ಕೆ. ಸುಬ್ಬರಾವ್ ಅವರು ನಮ್ಮನ್ನು ಬರಮಾಡಿ ಕೊಂಡರು.

ಅವರ ಮನೆಯಲ್ಲಿ ಅಂದು ಉಳಿದು ಮರುದಿನ ನಮ್ಮ ಮಿತ್ರರಾದ ಹಾಗೂ ಶ್ರೀ ಕಿಟ್ಟಿ ಮಾಸ್ಟರ್‌ರವರ ಶಿಷ್ಯರಾದ ಶ್ರೀ ಹೆಚ್. ಎಸ್. ಕೇಶವಮೂರ್ತಿ ಅವರ ಜೊತೆಯಲ್ಲಿ ಅವರ ಕಾರ್‌ನಲ್ಲಿ ಮೆಸಾಚುಸೆಟ್ಸ್‌ನ ಷರಾನ್‌ನಲ್ಲಿರುವ ಶ್ರೀಮತಿ ಹೇಮಾವಿಶ್ವನಾಥ್ ಅವರ ಮನೆಗೆ ಹೋದೆವು. ಅಲ್ಲಿ ಭಜನೆ ಕಾರ್ಯಕ್ರಮ ಇತ್ತು. ನಮ್ಮ ಜೆಟ್‌ಲ್ಯಾಗ್‌ನ್ನು ಅಲ್ಲೇ ಕಳೆದುಕೊಂಡೆವು. ಅಲ್ಲಿಂದ ನ್ಯೂಜರ್ಸಿಯಲ್ಲಿ ಕೇಶವಮೂರ್ತಿಯವರ ಮನೆಯಲ್ಲಿ ಕೃಷ್ಣಾಷ್ಟಮಿ ಆಚರಣೆ, ಭಜನೆ. ಅವರ ಮನೆಯವರು ಕಷ್ಟಪಟ್ಟು ಕೃಷ್ಣನಿಗೆ ಮಾಡಿದ್ದ ನೈವೇದ್ಯವನ್ನು ಅವರ ನಾಯಿ ಲ್ಯೂಕ್ ಮೊದಲು ಮೂಸಿ ನೋಡಿತು!

ನ್ಯೂಜರ್ಸಿಯಿಂದ ಮತ್ತೆ ನ್ಯೂಯಾರ್ಕ್‌ಗೆ ಪ್ರಯಾಣ. ಅಲ್ಲಿಂದ ಪೂಜ್ಯ ಸ್ವಾಮಿ ಪ್ರಬುದ್ಧಾನಂದಜೀ ಇರುವ ಸ್ಯಾನ್‌ಫ್ರಾನ್ಸಿಸ್ಕೋಗೆ ಪ್ರಯಾಣ. ಸುಮಾರು ನಾಲ್ಕು ಗಂಟೆಗಳ ವಿಮಾನಯಾನ. ನಾವು ನ್ಯೂಯಾರ್ಕ್ ಏರ್‌ಪೋರ್ಟ್ ತಲುಪಿದಾಗ ಆಗಲೇ ಸಂಜೆ 5-40. ನಮ್ಮ ವಿಮಾನದ ಸಮಯ ಇದ್ದುದ್ದು 5-30. ಈ ದಿನ ವಿಮಾನ ನಮಗೆ ದೊರೆಯುವುದಿಲ್ಲ ಎಂದುಕೊಂಡಿದ್ದೆವು. ಆದರೆ ನಮ್ಮ ಪುಣ್ಯಕ್ಕೆ ವಿಮಾನ ಅಂದು ತಡವಾಗಿ ಹೊರಟಿತ್ತು. ನಮ್ಮ ಟಿಕೇಟ್‌ಗಳನ್ನು ತೋರಿಸಿದಾಗ ಅಲ್ಲೇ ಕುಳಿತು ಕಾಯಲು ತಿಳಿಸಿದರು. ಅದರಂತೆ ಕುಳಿತಿದ್ದಾಗ ಕಿಟ್ಟಿಮೇಷ್ಟ್ರು — "ಶಂಕರಾ! ನಿನ್ನ ಹೆಸರು ಕರೀತಾ ಇದ್ದಾರೆ. ಹೋಗು" ಎಂದರು. ನನಗೆ ಆಶ್ಚರ್ಯ ಆಯ್ತು. ಅಲ್ಲಿ ಹೆಸರು ಕೂಗುತ್ತಿದ್ದ ಕರಿ ಅಮೇರಿಕನ್‌ನ ಉಚ್ಚಾರ ನನಗೆ ಏನೂ ಅರ್ಥವಾಗಲಿಲ್ಲ. ರಾತ್ರಿ ಸ್ಯಾನ್‌ಪ್ರಾನ್ಸಿಸ್ಕೋ ತಲುಪಿದಾಗ ಸ್ವಾಮೀಜಿಯವರು ನಮ್ಮ ವಿಮಾನದ ಬಳಿಗೆ ಬಂದು ನಮ್ಮನ್ನು ಸ್ವಾಗತಿಸಿದರು. ಅವರೊಂದಿಗೆ ಡಾ|| ಕಾರ್ಟ್, ಶ್ರೀ ವಿಜಯ್ ಗುಪ್ತಾ ಮುಂತಾದವರಿದ್ದರು. ಅವರು ಕಾರ್‌ಪಾರ್ಕಿಂಗ್‌ಗೆ ಹೋಗೋಣ ಎಂದು ಲಿಫ್ಟ್‌ನಲ್ಲಿ ಏರುತ್ತಾ ಹೋದಾಗ ನನಗೆ ಆಶ್ಚರ್ಯ! ಸ್ವಾಮೀಜಿಯವರ ಆತ್ಮೀಯ ಸ್ವಾಗತ ಮತ್ತು ಪ್ರೀತಿಯ ಉಪಚಾರ ನಮ್ಮ ಪ್ರಯಾಣದ ಆಯಾಸ, ಉದ್ವೇಗಗಳನ್ನು ಮರೆಮಾಡಿತು. ಸ್ವಾಮೀಜಿಯವರೊಂದಿಗೆ ಸುಮಾರು 10 ದಿನಗಳ ಕಾಲ ಹಳೆಯ ವೇದಾಂತ ಸೊಸೈಟಿ ಕಟ್ಟಡದಲ್ಲಿ ಹಾಗೂ ಒಲೇಮಾ ಸೆಂಟರ್‌ನಲ್ಲಿ ಕಳೆದ ಕ್ಷಣಗಳು ಅವಿಸ್ಮರಣೀಯ. ಒಂದು ದಿನ ನಮ್ಮನ್ನು ಅವರು ಕಾರಿನಲ್ಲಿ ಅಲ್ಲೇ ಸಮೀಪದ ವೇದಾಂತ ಸೊಸೈಟಿ ಕೇಂದ್ರಗಳಾದ — ಬರ್ಕಲಿ, ಸೆಕ್ರಮೆಂಟೋಗಳಿಗೆ ಕರೆದೊಯ್ದರು. ದಾರಿಯಲ್ಲಿ ಒಂದು ಕಡೆ, ಮಾಡಿ ತಂದಿದ್ದ ಅಡುಗೆಯನ್ನು ಅಮೇರಿಕನ್ ರಿವರ್ ದಡದಲ್ಲಿ ಕುಳಿತು ಸವಿದೆವು. ಸ್ವಾಮೀಜಿಯವರು ನನಗೆ ಅಮೇರಿಕಾದಲ್ಲಿ ಪಾತ್ರೆತೊಳೆಯುವ ವಿಧಾನವನ್ನು ಹೇಳಿಕೊಟ್ಟರು. ಎಷ್ಟು ಡಿಟರ್ಜೆಂಟ್ ಹಾಕಬೇಕು ಬಿಸಿನೀರು, ತಣ್ಣೀರನ್ನು ಹೇಗೆ ಉಪಯೋಗಿಸಬೇಕೆಂದು ಹೇಳಿಕೊಟ್ಟರು. ಅದು ಮುಂದೆ ನನಗೆ ಅಮೆರಿಕಾಪ್ರವಾಸದಲ್ಲಿ ಉಪಯೋಗಕ್ಕೆ ಬಂದಿತು. ಒಲೇಮಾದಲ್ಲಿ 2000 ಎಕರೆ ಕಾಡಿನ ಮಧ್ಯೆ ಕುಟೀರ. ಅಲ್ಲಿ ಜಿಂಕೆಗಳ ಓಡಾಟ. ಪ್ರಶಾಂತ ವಾತಾವರಣ, ಇವೆಲ್ಲವೂ ಒಂದು ಹೊಸ ಅನುಭವವನ್ನು ನೀಡಿದವು. ಡಾ|| ಕಾರ್ಟೆಯವರು ನಮ್ಮ ಹಾಡಿನ ಒಂದು ಕ್ಯಾಸೆಟ್ ರೆಕಾರ್ಡ್ ಮಾಡಿ ನಮಗೂ ಒಂದು ಪ್ರತಿ ಕೊಟ್ಟಿದ್ದಾರೆ. ಅವರ ಶ್ರೀಮತಿ (ಈಗ ದಿವಂಗತೆ) ನಾನು ಅಲ್ಲಿನ ಯಾಸಿಮಿಟಿ ಪ್ರವಾಸಕ್ಕೆ ಹೋಗಿದ್ದಾಗ ನನಗೆ ಬೇಕಾದ ತಿಂಡಿ ತಿನಿಸುಗಳನ್ನು ಮಾಡಿಕೊಟ್ಟಿದ್ದರು. ಅಲ್ಲದೆ ನಮ್ಮ ಖರ್ಚಿಗೆ ಹಣ ಸಹ ಕೊಟ್ಟಿದ್ದರು. ಅವೆಲ್ಲಾ ಮರೆಯಲಾಗದ ನೆನಪುಗಳು.

ಸ್ಯಾನ್‌ಫ್ರಾನ್ಸಿಸ್ಕೋದಿಂದ ನಾವು ಲಾಸ್ ಏಂಜಲೀಸ್, ಸ್ಯಾಂಡಿಯಾಗೋಗಳಲ್ಲಿ ಭಜನೆಗಳನ್ನು ಮುಗಿಸಿಕೊಂಡು ಮಿಲ್‌ವಾಕಿಗೆ ಬಂದೆವು. ಅಲ್ಲಿ ಗುಜರಾತಿ ಸ್ನೇಹಿತರಾದ ಶ್ರೀ ಪಟೇಲ್‌ರವರ ಮನೆಯಲ್ಲಿ ನಮ್ಮನ್ನು ಇರಿಸಿದರು. ಅಲ್ಲಿ ನಮ್ಮದೇ ರಾಜ್ಯಭಾರ. ಪತಿ, ಪತ್ನಿಯರಿಬ್ಬರೂ ಬೆಳಗ್ಗೆ ಎದ್ದು ಕೆಲಸಕ್ಕೆ ಹೊರಟುಹೋದರೆ ನಾನು ಮತ್ತು ಕಿಟ್ಟಿಮೇಷ್ಟ್ರು ಸೇರಿ ಪಾತ್ರೆಗಳನ್ನು ತೊಳೆದು ಅಡಿಗೆ ಮಾಡುವುದು, ಕಿಟ್ಟಿ ಮೇಷ್ಟ್ರು ಆಪಲ್ ಗೊಜ್ಜು ಮಾಡುವುದರಲ್ಲಿ ಪರಿಣಿತರು. ಪಟೇಲರ ಮನೆಯಲ್ಲಿ ಬೇಳೆ ಬೇಯಿಸಿ ಫ್ರಿಡ್ಜ್‌ನಲ್ಲಿಟ್ಟಿದ್ದರು. ನಾವು ಅದನ್ನು ಬಳಸಿಕೊಂಡು ಬದನೆಕಾಯಿ, ಈರುಳ್ಳಿ, ಆಲೂಗೆಡ್ಡೆ ಹಾಕಿ ಹುಳಿ ಮಾಡಿದೆವು. ಅಂದು ಸಂಜೆ ಬಂದ ಶ್ರೀ ಪಟೇಲ್ ಹಸಿವು ಎಂದಾಗ ಕಿಟ್ಟಿಮೇಷ್ಟ್ರು ಮಾಡಿದ ಆ ಹುಳಿ ಊಟಮಾಡಿ ಬಹಳ ಆನಂದಿಸಿದ. ಆತನೇ ನಮ್ಮನ್ನು ಚಿಕಾಗೋದ ವಿಶ್ವಧರ್ಮ ಸಮ್ಮೇಳನಕ್ಕೆ ಕರೆದೊಯ್ದ.

ಚಿಕಾಗೋದಲ್ಲಿ ಪಾಮರ್ ಹೌಸ್ ಹಿಲ್ಟನ್ ಹೋಟೆಲ್ನಲ್ಲಿ 15ನೇ ಮಹಡಿಯ ಕೊಠಡಿಯಲ್ಲಿ ಶ್ರೀ ಕುಮಾರ್ ಪೊದ್ದಾರ್ ಅವರು ನಮಗೆ ಕೊಠಡಿ ಗೊತ್ತು ಮಾಡಿದ್ದರು. ಆ ಕೊಠಡಿಯಲ್ಲಿ ನಾನು, ಕಿಟ್ಟಿ ಮೇಷ್ಟ್ರು ಮತ್ತು ಶ್ರೀ ಸುಬ್ಬರಾವ್ (ಕಿಟ್ಟಿ ಮೇಷ್ಟ್ರು ತಮ್ಮ) ಒಟ್ಟಾಗಿದ್ದೆವು. ಚಿಕಾಗೋದಲ್ಲಿ ನಾವು ಇಳಿದಾಗ ಮಧ್ಯಾಹ್ನ ಊಟದ ಸಮಯ. ಅಲ್ಲಿ ಏನು ತಿನ್ನಬೇಕೆಂಬುದೇ ಆತಂಕ. ನಾವು ಅಲ್ಲಿನ ಒಂದು ಹೋಟೆಲ್‌ಗೆ ಬಂದು ಅಲ್ಲಿ ಪಿಜ್ಜಾ (pizza) ತಿಂದೆವು. ಅದು ಎಷ್ಟು

ದೊಡ್ಡದಿತ್ತೆಂದರೆ ನಾವು ಅದರಲ್ಲಿ ಅರ್ಧಭಾಗ ಮಾತ್ರ ತಿನ್ನಲು ಸಾಧ್ಯವಾಯಿತು. ಉಳಿದರ್ಧವನ್ನು ಅಲ್ಲಿನ ಪರಿಚಾರಕಿ ನಮಗೆ ಪಾರ್ಸೆಲ್ ಮಾಡಿಕೊಟ್ಟಳು. ಆಕೆ ನಮ್ಮನ್ನು ಕಂಡು ತುಂಬಾ ಆತ್ಮೀಯವಾಗಿ ಮಾತನಾಡಿ ತನಗೆ 'ಅಚ್ಛಾ' ಎನ್ನುವ ಪದ ಮಾತ್ರ ಗೊತ್ತು ಎಂದು ಹೇಳಿದಳು. ಅದು ಹೇಗೆ ಎಂದಾಗ ತಾನು ಒಬ್ಬ ಪಾಕಿಸ್ತಾನಿಯನ್ನು ಮದುವೆಯಾಗಿ, ಬಿಟ್ಟಿದ್ದಾಗಿ ಹೇಳಿದಳು!

ವಿಶ್ವಧರ್ಮ ಸಮ್ಮೇಳನದ ಶತಮಾನೋತ್ಸವಕ್ಕೆ ಬೇರೆ ಬೇರೆ ದೇಶಗಳ ಸಾವಿರಾರು ಜನರು ಬಂದಿದ್ದರು. ಈ ಉತ್ಸವವನ್ನು ನಾವಿಳಿದಿದ್ದ ಹಿಲ್ಟನ್ ಹೋಟೆಲ್‌ನಲ್ಲೇ ಏರ್ಪಾಡು ಮಾಡಿದ್ದರು. ಒಂದು ದೊಡ್ಡ ಸಭಾಂಗಣ, ಅದು ಭರ್ತಿಯಾದರೆ ಅಕ್ಕಪಕ್ಕದ ಎರಡು ಸಭಾಂಗಣಗಳಲ್ಲಿ ಟಿ. ವಿ. ಮೂಲಕ ಸಮಾರಂಭ ನೋಡಲು ಏರ್ಪಾಟು ಮಾಡಿದ್ದರು.

ಚಿಕಾಗೊ ನಗರದ ಮೇಯರ್ ಮುಖ್ಯ ಅತಿಥಿ, ಪೂಜ್ಯ ಸ್ವಾಮಿ ಚಿದಾನಂದಜಿಯವರು 'ಮೂರ್ತ ಮಹೇಶ್ವರ' ಹಾಡಿದರು. ನಾವೂ ಅಂದು ಸಂಜೆ ಅಲ್ಲಿನ ವೇದಾಂತ ಸೊಸೈಟಿಗೆ ಭೇಟಿಕೊಟ್ಟೆವು. ಡಾ॥ ಆರ್. ಎಲ್. ಕಶ್ಯಪ್ ಅವರು ನಮ್ಮನ್ನು ಕರೆದೊಯ್ದರು. ಬರುವಾಗ ನಾವಿಬ್ಬರೂ ಬಸ್‌ನಲ್ಲಿ ಹೋಟೆಲ್‌ಗೆ ವಾಪಸ್ ಬಂದೆವು. ಸಮ್ಮೇಳನ ಮೂರು ದಿನಗಳ ಕಾಲ ನಡೆಯಿತು. ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರು, ತರಳಬಾಳು ಜಗದ್ಗುರುಗಳು, ಶ್ರೀಮಾತೆ ಅಮೃತಾನಂದಮಯಿ ಅವರೂ ಸಹ ಬಂದಿದ್ದರು. ಅಲ್ಲಿ ಒಂದು ಪ್ರಮುಖ ಸಭೆ ಹಾಗೂ ಬೇರೆ ಇತರ ಸಣ್ಣ, ಸಣ್ಣ ಕಾರ್ಯಕ್ರಮಗಳು ಏರ್ಪಾಡಾಗಿದ್ದವು. ನಮಗೂ ಒಂದು ದಿನ ಶ್ರೀ ಸುಬ್ಬರಾವ್ ಅವರೊಂದಿಗೆ ಹಾಡುವ, ನನಗೆ ತಬಲ ನುಡಿಸುವ ಸದವಕಾಶ ದೊರೆಯಿತು. ಕಿಟ್ಟಿಮೇಷ್ಟ್ರು 'ತಾಥೈಯಾ ತಾಥೈಯಾ' ಹಾಡಿ ಅದರ ಅರ್ಥವನ್ನು ವಿವರಿಸಿದರು. ಅದೊಂದು ಅದ್ಭುತ ಅನುಭವ! ನಮ್ಮದೇ ಪೂರ್ಣ ಎರಡು ಗಂಟೆಗಳ ಗಾಯನವನ್ನು ಸಹ ಒಂದು ಸಣ್ಣ ಕೊಠಡಿಯಲ್ಲಿ ಏರ್ಪಾಟು ಮಾಡಿದ್ದರು.

ಅಲ್ಲದೇ ಡಾ॥ ಯು. ಆರ್. ಅನಂತಮೂರ್ತಿ ಹಾಗೂ ಮತ್ತೂರು ಕೃಷ್ಣಮೂರ್ತಿಯವರು ಸಹ ಅಲ್ಲಿ ಭಾಷಣ ಮಾಡಿದರು. ಈ ಎಲ್ಲಾ ಅನುಭವವನ್ನು ಕಿಟ್ಟಿಮೇಷ್ಟ್ರು ತಮ್ಮ 'ವಿಶ್ವ ಧರ್ಮ ಸಮ್ಮೇಳನ' ಪುಸ್ತಕದಲ್ಲಿ ಬರೆದಿದ್ದಾರೆ.

ಚಿಕಾಗೊದಿಂದ ನಾವು ಡೆಟ್ರಾಯಿಟ್‌ಗೆ ಬಂದೆವು. ಅಲ್ಲಿ ಒಂದು ಕಾರ್ಯಕ್ರಮ ನಡೆಸಿ ಡಾ॥ ಶ್ರೀ ಪಾದರಾಜು ಅವರ ಜೊತೆ ಶ್ರೀ ಶ್ರೀಕುಮಾರ್ ಪೊದ್ದಾರ್ ಅವರಿರುವ ಓಕೆಮಾಸ್ (ಮಿಚಿಗನ್) ಗೆ ಬಂದೆವು. ಅಲ್ಲಿ ಸುಮಾರು ನಾಲ್ಕು ದಿನಗಳ ಕಾಲ ಇದ್ದು ಅಲ್ಲಿಂದ ಇಂಡಿಯಾನಾದ ಮನ್ಸಿಯ ಶ್ರೀ ಶಿವಸ್ವಾಮಿಯವರ ಮನೆಗೆ ಬಂದೆವು. ಅವರು ನಮ್ಮ ಅಮೇರಿಕಾ ಪ್ರವಾಸದ ಮುಖ್ಯ ಸಂಯೋಜಕರು. ಅವರು, ಅವರ ಶ್ರೀಮತಿ ಇಬ್ಬರೂ ಅಲ್ಲಿರುವ ಬಾಲ್ ಸ್ಟೇಟ್ ಯೂನಿವರ್ಸಿಟಿಯಲ್ಲಿ ಕೆಲಸ ಮಾಡುತ್ತಿದ್ದಾರೆ. ಅಲ್ಲಿಯೂ ಸಹ ನಮ್ಮ ಕಾರ್ಯಕ್ರಮ ಹಾಗೂ ಕಿಟ್ಟಿಮೇಷ್ಟರ ಭಾರತೀಯ ಸಂಗೀತದ ಬಗ್ಗೆ ವಿವರಣೆಯ ಕಾರ್ಯಕ್ರಮ ನಡೆಯಿತು.

ಅಲ್ಲಿಂದ ನಾವು ಹಡ್ಸನ್‌ಗೆ ಬಂದು ಪೂಜ್ಯ ಸ್ವಾಮಿ ಹರ್ಷಾನಂದಜೀಯವರ ಪೂರ್ವಾಶ್ರಮದ ತಮ್ಮ ಡಾ॥ ವೆಂಬಾರ್ ಶ್ರೀನಿವಾಸನ್ ಅವರ ಮನೆಯಲ್ಲಿ ಉಳಿದೆವು. ಅಲ್ಲಿನ ದೇವಸ್ಥಾನದಲ್ಲಿ ಒಂದು ಕಾರ್ಯಕ್ರಮ ನಡೆಯಿತು. ಅವರೂ ಸಹ ಅತ್ಯಂತ ಪ್ರೀತ್ಯಾದರಗಳಿಂದ ನಮ್ಮನ್ನು ನೋಡಿಕೊಂಡರು. ಅಲ್ಲಿಂದ ನಮ್ಮ ಸ್ನೇಹಿತ ಡಾ॥ ಎಂ. ಎಲ್. ರಮೇಶ್ ಅವರಿರುವ ಪಿಟ್ಸ್‌ಬರ್ಗ್‌ಗೆ ಬಂದು ಒಂದು ವಾರ ತಂಗಿದ್ದೆವು. ಶ್ರೀ ರಮೇಶ್ ಅವರು, ಅವರ ಮನೆಯವರು ನಮ್ಮನ್ನು ಬಹಳ ಆದರದಿಂದ ನೋಡಿಕೊಂಡರು.

ಶ್ರೀ ರಮೇಶ್ ನಮ್ಮ ಭಜನೆಯನ್ನು ಪಿಟ್ಸ್‌ಬರ್ಗ್ ವೆಂಕಟೇಶ್ವರ ದೇವಾಲಯ, ಹಿಂದೂ ಟೆಂಪಲ್ ಹಾಗೂ ಇನ್ನೊಂದು ಸ್ಥಳದಲ್ಲಿ ಏರ್ಪಾಟು ಮಾಡಿದ್ದರು.

ಪಿಟ್ಸ್‌ಬರ್ಗ್‌ನಿಂದ ನಾವು ವಿಮಾನದಲ್ಲಿ ಕೆನಡಾದ ಟೊರಾಂಟೋಗೆ ಬಂದೆವು. ಅಲ್ಲಿ ಶ್ರೀ ರಮಣಿ ರಾಮಕೃಷ್ಣನ್ ಅವರಮನೆಯಲ್ಲಿ ವಾಸ್ತವ್ಯ ಹೂಡಿದೆವು.

ಅಲ್ಲಿಯೂ ಮಿಸಿಸೌಗಾದಲ್ಲಿ ಒಂದು ವೇದಾಂತ ಸೊಸೈಟಿ ಇದೆ. ಅಲ್ಲಿಯೂ ಭಜನೆಮಾಡಿದೆವು. ಶ್ರೀ ರಮಣಿ ಯವರು ನಮ್ಮ ಪ್ರವಾಸ ಸಂಯೋಜಕರಲ್ಲಿ ಒಬ್ಬರು. ಅವರ ಮಗಳು ಜಾಹ್ನವಿ ನನ್ನನ್ನು ಬಹಳವಾಗಿ ಹಚ್ಚಿಕೊಂಡಿದ್ದು, ಸದಾ ನನ್ನ ಜೊತೆಯಲ್ಲಿ ಇರುತ್ತಿದ್ದಳು. ಶ್ರೀ ರಮಣಿಯವರು ನನಗೆ ನಯಾಗರಾ ಜಲಪಾತ ತೋರಿಸಿದರು. ಟೊರಾಂಟೋದ CNN ಟವರ್ ಸಹ ನೋಡಿದೆ. ಕಿಟ್ಟಿ ಮೇಷ್ಟ್ರು ಆಟ್ಟವಾಗೆ ಹೋಗಿ ಬಂದರು.

ಅಲ್ಲಿಂದ ಶ್ರೀ ಶ್ರೀಕಾಂತ್ ಇನಾಂದಾರ್‌ರವರು ನಮ್ಮನ್ನು ಪುನಃ ಅಮೇರಿಕಾದ ಮಿಚಿಗನ್‌ಗೆ ಕಾರಿನಲ್ಲಿ ಕರೆತಂದರು. ಅಲ್ಲಿ ಉಮೇಶ್ ರೋಹಟಗಿಯವರ ಮನೆಯಲ್ಲಿ ಇದ್ದೆವು. ಅಲ್ಲಿಯೂ ಸುತ್ತಮುತ್ತ ಒಂದೆರಡು ಭಜನೆಗಳಾದವು. ಅಲ್ಲಿಂದ ಪುನಃ ಶ್ರೀ ಶ್ರೀಪಾದರಾಜು ರವರ ಜೊತೆ ಒಕೆಮಾಸ್‌ಗೆ ಬಂದೆವು. ಮುಂದಕ್ಕೆ ರೋವನೋಕ್ (ವೆಸ್ಟರ್ನ್ ವರ್ಜೀನಿಯಾ) ನಲ್ಲಿದ್ದ ಕಿಟ್ಟಿ ಮೇಷ್ಟರ ಸೋದರಳಿಯ ಡಾ॥ ಕೃಷ್ ರಾಮಚಂದ್ರನ್ ಅವರ ಮನೆಯಲ್ಲಿ ಉಳಿದೆವು. ಅವರ ಪುಟ್ಟಮಕ್ಕಳಾದ ಗುಹ ಹಾಗೂ ರವಿ ನಮಗೆ ಆಪ್ತರಾದರು. ಇತ್ತೀಚಿಗೆ ಬೆಂಗಳೂರಿನಲ್ಲಿ ನಡೆದ ಅವರ ಮುಂಜಿಗೆ ನಾವಿಬ್ಬರು ಹೋಗಿದ್ದೆವು. ಅವರು ತಮ್ಮ ಮಕ್ಕಳ ಮುಂಜಿಯ ಆಹ್ವಾನ ಪತ್ರಿಕೆಯಲ್ಲಿ ಉಡುಗೊರೆಗೆ ಬದಲಾಗಿ ಸ್ವಾಮಿ ವಿವೇಕಾನಂದ ಎಜುಕೇಷನ್ ಸೊಸೈಟಿಗೆ ದಾನ ನೀಡ ಬೇಕಾಗಿ ಕೋರಿದ್ದರು. ಇದರಿಂದ ಸುಮಾರು ರೂ. 20,000ಕ್ಕೂ ಹೆಚ್ಚು ಹಣ ಶಾಲೆಗೆ ಬಂದಿದೆ.

ರೋವನೋಕ್‌ನಿಂದ ಕಡೆಯದಾಗಿ ವಾಷಿಂಗ್ಟನ್ನಿಗೆ ಬಂದೆವು. ಅಲ್ಲಿ ಶ್ರೀ ಹರಿ ಪದ್ಮನಾಭನ್ (ಕಿಟ್ಟಿ ಮೇಷ್ಟ್ರ ಅತ್ತಿಗೆಯ ತಮ್ಮ) ಅವರ ಮನೆಯಲ್ಲಿ ಉಳಿದೆವು. ಅಲ್ಲಿ ಶ್ರೀಮತಿ ಶಾಂತಾರವರು (ನಮ್ಮ ಸೋದರಿ ಸರೋಜ ಮೈತ್ರಿಣಿ) ನಮ್ಮನ್ನು ಅವರ ಫ್ಲಾಟ್‌ಗೆ ಕರೆದೊಯ್ದು ಮಸಾಲೆದೋಸೆ ಮಾಡಿಕೊಟ್ಟರು. ಅವರು ಕೆಲಸ ಮಾಡುವ ಕಾಂಗ್ರೆಸ್ ಲೈಬ್ರರಿ ತೋರಿಸಿದರು. ನನಗೆ ಅಲ್ಲಿನ ಮುಖ್ಯ ಸ್ಮಿತ್ ಸೋನಿಯನ್ ಮ್ಯೂಸಿಯಂನ್ನು ನೋಡಲು ಸಹಾಯ ಮಾಡಿದರು.

ಕಟ್ಟಕಡೆಯದಾಗಿ ನಾವು ವಾಷಿಂಗ್ಟನ್‌ನಿಂದ ಹೊರಟು ಭಾರತಕ್ಕೆ ಮರಳಿದೆವು. ಸುಮಾರು ಮೂರು ತಿಂಗಳ ಕಾಲದ ನಮ್ಮ ಅಮೇರಿಕಾ ಪ್ರವಾಸ ಮುಗಿದಿತ್ತು. ಶಾಲೆಗೆ ಸುಮಾರು ಆರು ಲಕ್ಷ ರೂ. ಆದಾಯ ಬಂದಿತ್ತು. ಅದಕ್ಕೇ ನಮ್ಮ ಅಧ್ಯಕ್ಷರಾಗಿದ್ದ ಡಾ॥ ಪಿ. ಎಸ್. ನಾರಾಯಣ ರಾವ್ ಅವರು — 'There is a song behind every stone of this building' ಎಂದು ಕಿಟ್ಟಿಮೇಷ್ಟನ್ನು ಪ್ರಶಂಸಿಸಿದ್ದಾರೆ. ಹೂವಿನ ಜೊತೆ ನಾರು ಸ್ವರ್ಗ ಸೇರಿತು ಎಂಬಂತೆ ಅವರೊಡನೆ ನನಗೂ ಅಮೇರಿಕಾ ದರ್ಶನ, ಅಲ್ಲಿಯ ಆತ್ಮೀಯ ಸ್ನೇಹಿತರ ಪರಿಚಯ ಆಯಿತು. ಅಲ್ಲಿ ನಾವು ಹೋದಕಡೆಯಲ್ಲಿ, ಶ್ರೀ ಕಿಟ್ಟಿಮೇಷ್ಟರಿಗೆ ಇರುವ ಪರಿಚಯದವರ, ಸ್ನೇಹಿತರ ಅಭಿಮಾನಿಗಳ ಸಂಖ್ಯೆ ಕಂಡು ಮೂಗಿನ ಮೇಲೆ ಬೆರಳಿಡುವಂತಾಯಿತು. ಅನೇಕರು ಅವರು ಪಂಡಿತ್ ಭೀಮ್‌ಸೇನ್ ಜೋಷಿಯವರಂತೆ ಹಾಡುತ್ತಾರೆ ಎಂದು ಹೊಗಳುತ್ತಿದ್ದರು. ಈ ಪ್ರವಾಸದುದ್ದಕ್ಕೂ ಅವರ ನನಗೆ ಹಿರಿಯ ಅಣ್ಣನಂತೆ ಸೂಕ್ತ ಮಾರ್ಗದರ್ಶನ ನೀಡಿ, ನಾನು ಮಾಡಿದ ತಪ್ಪುಗಳನ್ನು ಸಹಿಸಿಕೊಂಡು ಶಾಲೆಗೆ ಒಳ್ಳೆಯ ಹೆಸರು, ಹಣ ಎರಡೂ ಬರುವಂತೆ ಮಾಡಿದ್ದಾರೆ. ಅವರ ಈ ನಿಸ್ಪೃಹ ಕೆಲಸಕ್ಕಾಗಿ ನಾವು ಎಂದೆಂದಿಗೂ ಅವರಿಗೆ ಋಣಿಗಳು. ಭಗವಂತನು ಅವರಿಗೆ ಇನ್ನಷ್ಟು ಆರೋಗ್ಯ, ಆಯುಷ್ಯ ಕೊಟ್ಟು ಕಾಪಾಡಲಿ ಎಂದು ಕಳಕಳಿಯಿಂದ ಪ್ರಾರ್ಥಿಸುತ್ತೇನೆ.



* * * * *

# 'ಕಿಟ್ಟಿ ಮೇಷ್ಟ್ರು'

✍ **ಗೋಪಿ,** ಗೋಪಿ ಸ್ಟುಡಿಯೋ
ಕೆ.ಜಿ. ನಗರ, ಬೆಂಗಳೂರು -560 019 ☎ 26510276

**ಇ**ವರು ಪ್ರೊಫೆಸರ್ ಕೃಷ್ಣಸ್ವಾಮಿ ಇರಬಹುದು. ಕಿಟ್ಟಿ ಮೇಷ್ಟ್ರು ಇರಬಹುದು. ಹಲವರಿಗೆ ಹಲವು ನಾಮಾಂಕಿತ ದೊಂದಿಗೆ ಕರೆಯಲ್ಪಡುವ ಮಹಾನ್ ವ್ಯಕ್ತಿಯಾಗಿರ ಬಹುದು. ಆದರೆ, ಇವರು ನಮ್ಮ ವಿಹಾರಾರ್ಥಿಗಳ ಸಂಘದ ಅಧ್ಯಕ್ಷರು!

ಉದಯದೊಳೆದ್ದು ವಿಹಾರಾರ್ಥವಾಗಿ ಈ ಉದ್ಯಾನ ವನವ ಪ್ರವೇಶಿಸಿ, ಹಸಿರು ಹಾಸಿನ ಮೇಲೆ ಬಣ್ಣ ಬಣ್ಣ ದಿಂದ ಕಂಗೊಳಿಸುವ ಪುಷ್ಪಗಳ ಕಂಡು ಬನಸಿರಿಗೊಮ್ಮೆ ಸಂತಸದಿ ಬಾಗಿಲಲ್ಲೇ ಕೈ ಮುಗಿದು 'ಹರೇ ರಾಮ ಹರೇ ರಾಮ' ಎಂಬ ನಾಮಸ್ಮರಣೆಯೊಂದಿಗೆ ಮುನ್ನಡೆಯು ತ್ತಿದ್ದರೆ, ಅದಮ್ಯ ಚೈತನ್ಯವೇ ಉದ್ಯಾನವನವನ್ನು ಪ್ರವೇಶಿಸಿ ದಂತೆಯೇ ಸರಿ! ವಿಹಾರಾರ್ಥಿಗಳೆಲ್ಲ ಭಕ್ತಿಭಾವದಿಂದ ಇವರಿಗೆ ನಮಿಸುತ್ತಿದ್ದರೆ ಹಸನ್ಮುಖದಿಂದಲೇ ಆಶೀರ್ವದಿ ಸುತ್ತ ನಡೆಯುವ ಇವರು ಹರಿಹರನ ಗುಡ್ಡಕ್ಕೆ ಹತ್ತಿ ಹೋಗುವಾಗ ಗಿಡಮರಗಳನ್ನೊಮ್ಮೆ ತಲೆಯೆತ್ತಿ ನೋಡು ವರು. ಚಿಲಿಪಿಲಿಗುಟ್ಟುವ ಪಕ್ಷಿಗಳ ನಿನಾದದ ಜೊತೆಗೆ ತಮ್ಮ ನಾದ ಮಾಧುರ್ಯವ ಜೊತೆಗೂಡಿಸಿ ತಾಳಿ ಹಾಕುತ್ತಿರುವವರೇನೋ ಎಂಬಂತೆ ಭಾಸವಾಗುವುದು. ಪಕ್ಷಿಗಳ ಚಿಲಿಪಿಲಿ ನಾದವ ಆಲಿಸಿದ ನಂತರ ಹರಿಹರನ ಗುಡ್ಡದ ಮೇಲೆ ನಿಂತು ಪುರಾಣ ಪ್ರಸಿದ್ಧವಾದ ಗವಿ ಗಂಗಾಧರೇಶ್ವರನ ದೇವಸ್ಥಾನದ ತ್ರಿಶೂಲ, ಢಮರು ಗಳನ್ನೊಮ್ಮೆ ನೋಡಿ, ಗರ್ಭಗುಡಿಯೊಳಗಿರುವ ಗಂಗಾಧರನನ್ನು ತಮ್ಮ ಅಂತರಾತ್ಮದಲ್ಲಿ ಪ್ರತಿಷ್ಠಾಪಿಸಿ ಅನಂತರ ನಮಸ್ಕಾರಗಳನ್ನು ಸಲ್ಲಿಸಿ, 'ಓಂ ನಮಃ ಶಿವಾಯ' ಎಂಬ ಪಂಚಾಕ್ಷರವನ್ನು ಉಚ್ಚರಿಸುತ್ತಾ ಮುಂದೆ ಸಾಗಿದರೆ, ಪ್ರತಿಷ್ಠಾಪಿತ ಗಣಪತಿ, ನಾಗದೇವತೆಗಳಿಗೆ ನಮಿಸಿ, ತ್ರಿಮೂರ್ತಿಗಳ ಸ್ವರೂಪದ ಅಶ್ವತ್ಥವೃಕ್ಷ ಪ್ರದಕ್ಷಿಣೆ ಯೊಂದಿಗೆ, ಬನ್ನಿ ವೃಕ್ಷವನ್ನು ಸುತ್ತಿ ಗುಡ್ಡದಲ್ಲಿ ಪೂರ್ವಾಭಿ ಮುಖವಾಗಿ ವಿರಾಜಿಸುತ್ತಿರುವ ಹರಿಹರೇಶ್ವರನೊಡ ಗೂಡಿ ಸಕಲ ದೇವತೆಗಳಿಗೆ ಭಕ್ತಿಯಿಂದ ಪ್ರದಕ್ಷಿಣೆ, ನಮಸ್ಕಾರಗಳನ್ನು ಸಲ್ಲಿಸಿ ಮುನ್ನಡೆದು ಎಲ್ಲ ಹಿರಿಯ-ಕಿರಿಯ ವಿಹಾರಾರ್ಥಿಗಳ ಜೊತೆ ಸೇರಿ ಲಘು ವ್ಯಾಯಾಮ ಮಾಡುವರು.

ಅಷ್ಟರಲ್ಲಿ ಅವರ ಸಮಾನವಯಸ್ಕರಾದ ಚನ್ನಪ್ಪ ನವರು, ದಾಸ್‌ರವರು, ರಾಮರಾಯರು, ವೆಂಕಟರಮಣ ಶೆಟ್ಟರು ಎಲ್ಲರೂ ಬಂದು ಸೇರುವರು. ಅವರೊಂದಿಗೆ ಕುಶಲೋಪರಿಯಾಗುತ್ತಿದ್ದಂತೆಯೇ 'ಸ್ನೇಹರಂಗ'ದ ಎಲ್ಲ ವಿಹಾರಾರ್ಥಿಗಳ ಗುಂಪು ದೇವಸ್ಥಾನದ ಮುಂಭಾಗದಲ್ಲಿ ಸೇರುವರು. ಅಲ್ಲಿ ನಡೆಯುವ ಎಲ್ಲ ಸ್ನೇಹಿತರ ಮಾತು-ಕತೆಗಳಲ್ಲಿ ಈ ಅಧ್ಯಕ್ಷರೂ ಸಹ ಅವರ ಹಿರಿಯ ಮಿತ್ರವೃಂದದೊಂದಿಗೆ ಸೇರಿ ಅದು ಯಾವುದೇ ವಿಚಾರ ವಾಗಿರಲಿ, ಕ್ರೀಡೆಯಾಗಿರಬಹುದು, ಸಂಗೀತವಿರ ಬಹುದು, ನಗೆ-ರಸಮಂಜರಿಯಾಗಿರಬಹುದು, ಗತಿಸಿದ ನಾಯಕರ ವಿಚಾರವಾಗಿರಲಿ, ಸ್ವಾತಂತ್ರ್ಯದ ವಿಚಾರ ವಾಗಿರಲಿ ಎಲ್ಲ ಯುವಕರು-ಹಿರಿಯರೊಂದಿಗೆ ಚರ್ಚಿಸಿ, ತಾವೂ ಸಹ ನಕ್ಕು ನಲಿದು, ಎಲ್ಲರ ಜೊತೆಯಲ್ಲಿಯೂ ಬೆರೆಯುವರು. ನಂತರ ತಾವೇ ನೆಟ್ಟ ಸಸಿಗಳ ತಪಾಸಣೆ.... ಅದು ನಿಂಬೆಗಿಡವಾಗಿರಬಹುದು, ಬೇವಿನ ಸಸಿಯಾಗಿರಬಹುದು, ನೆಲ್ಲಿಯ ಗಿಡವಾಗಿರಲಿ ಅವು ಗಳನ್ನು ಕೀಳುವುದಾಗಲೀ ಅಥವಾ ಮುರಿದು ಹಾಳು ಮಾಡುವುದಾಗಲೀ ಮಾಡಿದರೆ ಸಹಿಸರು. ಅವುಗಳಿಗೆ ಯಾರಾದರೂ ಕೈ ಹಚ್ಚಿದ್ದನ್ನು ಕಂಡರೆ, ಅವರನ್ನು ವಾಗ್ ದಂಡದಿಂದಲೇ ದಂಡಿಸಿ ಆ ಸಸಿಗಳನ್ನು ಬೆಳೆಯಲು ಬಿಡಿ ಎಂದು ನಯವಾಗಿಯೇ ಅವರಿಗೆ ತಿಳಿಹೇಳುವರು.

ಪ್ರತಿ ಸೋಮವಾರದಂದು ಹರಿಹರನ ದೇವಸ್ಥಾನದ ಸಾನ್ನಿಧ್ಯದಲ್ಲಿ ಇವರ ಮುಖಂಡತ್ವದಲ್ಲಿ ಸಾಮೂಹಿಕ ಭಜನೆ, ಮಂಗಳಾರತಿ, ಪ್ರಸಾದ ವಿನಿಯೋಗ ನಡೆಯು ವುದು. ಪ್ರತಿ ತಿಂಗಳ ಎರಡನೇ ಮಂಗಳವಾರ ಇವರ ಪ್ರೋತ್ಸಾಹದಿಂದಲೇ ನಡೆಯುವ ಕಾಫಿ ದಿನದ ಆರಂಭ

ಇವರ ಪ್ರಾರ್ಥನೆಯೊಂದಿಗೆಯೇ. ನಂತರ ಸದಸ್ಯರುಗಳಿಂದ ನಡೆಯುವ ಹಾಡು, ನಗೆಹನಿ, ಏಕಪಾತ್ರಾಭಿನಯ ಮುಂತಾದ ಮನರಂಜನಾ ಕಾರ್ಯಕ್ರಮದಲ್ಲಿ ತಾವೂ ಸಹ ಭಾಗಿಯಾಗಿ, ಎಲ್ಲರನ್ನೂ ರಂಜಿಸುವರು. ಕೊನೆಯಲ್ಲಿ ನಡೆಯುವ ಕಾಫಿ-ತಿಂಡಿಯೊಂದಿಗೆ ಆ ದಿನದ ಕಾರ್ಯಕ್ರಮದ ಮುಕ್ತಾಯವಾಗುವುದು.

ಉದ್ಯಾನವನದಲ್ಲಿ ನಡೆಯುವ ಎಲ್ಲ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಬೆರೆಯುವ ಈ ಸ್ವರ್ಣಮಾನವರು ಇನ್ನೂ ನೂರ್ಕಾಲ ಸದಾ ನಮ್ಮ ಅಧ್ಯಕ್ಷರಾಗಿಯೇ ಎಲ್ಲರನ್ನೂ ಆಶೀರ್ವದಿಸುತ್ತಿರಲೆಂದು ಆಶಿಸುತ್ತೇವೆ.

**'ಸ್ನೇಹರಂಗ' ತಿಮ್ಮೇಶಪ್ರಭು ಉದ್ಯಾನವನ**
**ವಿಹಾರಾರ್ಥಿಗಳ ಸಂಘ**

* * * * *

---

## ಕಪ್ಪೆಗೆ ಸಿಕ್ಕಿದ ಬೆಳ್ಳಿ ರೂಪಾಯಿ

ಭಗವಾನ್ ಶ್ರೀರಾಮಕೃಷ್ಣರು ಯುವಜನತೆಯ ವ್ಯಕ್ತಿತ್ವನಿರ್ಮಾಣ ಹಾಗೂ ಚಾರಿತ್ರ್ಯದ ಬೆಳವಣಿಗೆಯ ಬಗ್ಗೆ ವಿಶೇಷ ಆಸಕ್ತಿ ವಹಿಸುತ್ತಿದ್ದು ಬಾಲ್ಯದಿಂದಲೇ ಅತ್ಯುತ್ತಮ ಆದರ್ಶಗಳನ್ನಿಟ್ಟುಕೊಂಡು ಶಿಕ್ಷಣ ಪಡೆದರೆ ಅಂತಹ ವ್ಯಕ್ತಿ ಸಮಾಜಕ್ಕೆ ಭೂಷಣವೆನ್ನುತ್ತಿದ್ದರು.

ಆದರೆ ಇಂದಿನ ಆಧುನಿಕ ವಿದ್ಯಾಭ್ಯಾಸ ಪದ್ಧತಿಯಲ್ಲಿ ಚಾರಿತ್ರ್ಯನಿರ್ಮಾಣದ ಸಂಪೂರ್ಣ ಅಭಾವದಿಂದಾಗಿ, ಅತ್ಯುನ್ನತ ಶಿಕ್ಷಣಪಡೆದು ಉನ್ನತ ಸ್ಥಾನಮಾನಗಳಲ್ಲಿರುವ ಹಲವರು ಹಣದ ಆಮಿಷಕ್ಕೆ ಬಲಿಯಾಗಿ ಭ್ರಷ್ಟಾಚಾರದಲ್ಲಿ ನಿರತರಾಗಿರುವುದು ನಮಗೆಲ್ಲ ತಿಳಿದ ವಿಷಯವೇ. ಎಷ್ಟು ಹಣ ಸಂಪಾದನೆಯಾಗುತ್ತಿದ್ದರೂ ಅತ್ಯಾಸೆಯಿಂದ ಅಧರ್ಮ ಮಾರ್ಗದಲ್ಲಿ ಮತ್ತಷ್ಟು ಗಳಿಸುವವರು ಲೋಭಕ್ಕೊಳಗಾಗಿರುವವರೆಂದು ಪರಮಹಂಸರು ಗುರ್ತಿಸುತ್ತಿದ್ದರು. "ಹೆಚ್ಚು ಹಣ ಸಂಪಾದನೆಗೆ ತೊಡಗುವುದು ಸರಿಯೇ?" ಎಂದು ಶಿಷ್ಯ ಮಹೇಂದ್ರನಾಥ ಕೇಳಿದಾಗ ಅವರು ಹೇಳಿದುದು ಗಮನಿಸಬೇಕಾದ ವಿಷಯ. "ಹೆಚ್ಚು ಸಂಪಾದನೆ ಮಾಡಿದರೇನೂ ತಪ್ಪಲ್ಲ, ಆದರೆ ಪ್ರಾಮಾಣಿಕತನದಿಂದ ಆ ಸಂಪಾದನೆಯಾಗಬೇಕು".

ಶ್ರೀರಾಮಕೃಷ್ಣರ ಅಭಿಮತದಲ್ಲಿ ಪರಿಶುದ್ಧ ಚಾರಿತ್ರ್ಯವುಳ್ಳವನು ಪರಮಾತ್ಮ ಕೊಟ್ಟಿದ್ದರಲ್ಲಿ ಸಂತೃಪ್ತಜೀವನ ನಡೆಸುತ್ತಾನೆ. ನ್ಯಾಯರೀತಿಯ ವ್ಯವಹಾರಗಳಿಂದ ಹೆಚ್ಚು ಸಂಪಾದನೆಯಾದರೆ ಅದನ್ನು ಸದ್ವಿನಿಯೋಗ ಮಾಡಿದರಾಯಿತು, ಎನ್ನುತ್ತಿದ್ದರು.

16511

ಶ್ರೀಮಂತನು ಮಾನವಸೇವೆಯಲ್ಲಿ ತನ್ನ ಜೀವನವನ್ನು ಸಾರ್ಥಕಗೊಳಿಸಬೇಕು ಎಂದು ಪರಮಹಂಸರು ಒತ್ತಿಹೇಳುತ್ತಿದ್ದರು. ಅವರು ಜಗತ್ತು ಮಿಥ್ಯೆಯೆಂದು ತಿಳಿದಿದ್ದರೂ ಕೋಟ್ಯಾನುಕೋಟಿ ಜೀವಿಗಳ ಕಷ್ಟಸಂಕಟಗಳಿಗೆ ಕಣ್ಣುಮುಚ್ಚಿಕೊಂಡ ಒಣವೇದಾಂತಿಗಳಾಗಿರಲಿಲ್ಲ. ತಮ್ಮ ಶ್ರೀಮಂತ ಭಕ್ತ ಮಥುರನಾಥನೊಂದಿಗೆ ಯಾತ್ರೆ ಹೋಗಿದ್ದಾಗ ದಾರಿಯಲ್ಲಿ ಒಂದು ಊರಿನ ಜನ ಪ್ರಬಲ ಕ್ಷಾಮದಿಂದ ನರಳುತ್ತಿದ್ದರು. ಹಸಿವಿನಿಂದ ಕೊರಗುತ್ತಾ ಉಡಲು ಬಟ್ಟೆಯಿಲ್ಲದೆ ಚಳಿಯಲ್ಲಿ ಸೊರಗುತ್ತಿದ್ದ ನೂರಾರು ಮಂದಿ ನಿರ್ಗತಿಕರ ಅವಸ್ಥೆ ಕಂಡು ಕಣ್ಣೀರು ಸುರಿಸಿದರು. ಅವರೆಲ್ಲರಿಗೂ ಊಟ ಕೊಟ್ಟು ಉಡಲು ಬಟ್ಟೆ ಕೊಡಬೇಕೆಂದು ಮಥುರನಿಗೆ ತಿಳಿಸಿದರು. ಮಥುರನು, ರಸ್ತೆಯಲ್ಲಿ ಕಂಡ ಎಲ್ಲಾ ದರಿದ್ರರಿಗೂ ಹೊಟ್ಟೆಬಟ್ಟೆಗಾಗಿ ಕೊಡಲು ನನ್ನಬಳಿ ಹಣವಿಲ್ಲವೆಂದು ನಿರ್ದಯನಾಗಿ ನುಡಿದ. ಭಗವಾನರು, "ಹಾಗಾದರೆ ನಾನು ಇಲ್ಲೇ ಈ ಬಡಜನರೊಂದಿಗೇ ಇರುತ್ತೇನೆ" ಎನ್ನುತ್ತಾ ಅವರ ನಡುವೆ ಕುಳಿತು ಅಳತೊಡಗಿದರು. ನಿರ್ವಾಹವಿಲ್ಲದೆ ಮಥುರ ದುಡ್ಡು ಖರ್ಚುಮಾಡಿ ಅಷ್ಟು ಜನಕ್ಕೂ ಊಟಕ್ಕೆ ವ್ಯವಸ್ಥೆಮಾಡಿ ಕಲ್ಕತ್ತದಿಂದ ಅವರಿಗೆ ಬಟ್ಟೆ ತರಿಸಿ ವಿತರಿಸಿದನು. ಆಗ ಪರಮಹಂಸರು ಹೇಳಿದುದು ಗಮನಾರ್ಹ: "ನೀನು ಗಳಿಸಿದ ಹಣ ಇಂಥ ಬಡವರು ದುಡಿದ ಫಲ. ನೀನು ಜಗನ್ಮಾತೆಯ ಮೇಸ್ತ್ರಿ. ಆಕೆಯ ಹಣವನ್ನು ಆಕೆಯ ಮಕ್ಕಳ ಕ್ಷೇಮಕ್ಕಾಗಿ ವಿನಿಯೋಗಿಸಲೇಬೇಕು" ಎಂದು ಮಥುರನಾಥನಿಗೆ ಬುದ್ಧಿಹೇಳಿದರು. ಮುಂದೆ ಮಥುರನಾಥ ಪರಮಹಂಸರ ಬುದ್ಧಿವಾದದಂತೆ ತನ್ನ ಅತುಲ ಸಂಪತ್ತಿನ ಬಹುಭಾಗವನ್ನು ದರಿದ್ರ ನಾರಾಯಣರ ಸೇವೆಗೆ ಮೀಸಲಾಗಿಟ್ಟ.

ಭಗವಾನರ ಉಪದೇಶ ಚತುರ್ವಿಧ ಪುರುಷಾರ್ಥಗಳ ಆಧಾರದ ಮೇಲಿದೆ. ಅಂದರೆ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬುದನ್ನು ಪರಮಹಂಸರು ವಿಶೇಷವಾಗಿ ಎಣಿಸುತ್ತಿದ್ದುದು ಅವರ ಹೇಳಿಕೆಗಳಲ್ಲಿ ಎದ್ದುಕಾಣುತ್ತದೆ. ಧರ್ಮದ ಚೌಕಟ್ಟಿನಲ್ಲಿ ಅರ್ಥದ ಗಳಿಕೆ; ಮುಂದೆ ಅದೇ ತಳಹದಿಯಲ್ಲಿ ಧರ್ಮಕ್ಕನುಗುಣವಾದ ಆಸೆ ಆಕಾಂಕ್ಷೆಗಳನ್ನು ಸಾಧಿಸುತ್ತಾ ಮೋಕ್ಷದ ಮಾರ್ಗದಲ್ಲಿ ಮುನ್ನಡೆಯಬೇಕು. ಯುವಜನರು ಈ ಆದರ್ಶಪಾಲನೆಯಲ್ಲಿ ನಿರತರಾದರೆ ಇಹಪರಗಳೆರಡನ್ನೂ ಸಾಧಿಸಲು ಸಮರ್ಥರಾಗುತ್ತಾರೆ. "ಬಾಲ್ಯದಿಂದಲೇ ಉಪಯುಕ್ತವಾದ, ಬಲವಾದ ಶ್ರದ್ಧೆಯಿಂದೊಡಗೂಡಿದ ಆಲೋಚನೆಗಳು ಮಿದುಳಿನಲ್ಲಿ ಪ್ರವೇಶಿಸಲಿ", ಎಂಬ ಸ್ವಾಮಿ ವಿವೇಕಾನಂದರ ವಾಣಿಯನ್ನು ಈ ಸಂದರ್ಭದಲ್ಲಿ ಅತ್ಯವಶ್ಯಕವಾಗಿ ಸ್ಮರಿಸಬೇಕು.

ಪರಮಹಂಸರು ಭಕ್ತರೊಡನೆ ನಡೆಸಿದ ಸಂವಾದಗಳಲ್ಲಿ ಧರ್ಮದ ನೆಲಗಟ್ಟಿಲ್ಲದ ಸಂಪಾದನೆ ಅಹಂಕಾರದಲ್ಲಿ ಕೊನೆಗಾಣುತ್ತದೆ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಅದಕ್ಕೆ ಅವರದೇ ಒಂದು ಸುಂದರ ದೃಷ್ಟಾಂತ: ಕಪ್ಪೆಯೊಂದಕ್ಕೆ ಒಂದು ಬೆಳ್ಳಿ ರೂಪಾಯಿ ದೊರೆತಾಗ ತನ್ನಂತಹ ಶ್ರೀಮಂತನೇ ಇಲ್ಲವೆಂಬ ಅಹಂಕಾರವುಂಟಾಯಿತಂತೆ. ಮುಂದೊಂದು ದಿನ ಅದರ ಬಿಲದ ಮೇಲೆ ಕಾಲಿಟ್ಟು ನಡೆದು ಹೋದ ಆನೆಗೆ ಎಚ್ಚರಿಕೆ ಕೊಟ್ಟಿತಂತೆ, "ನನ್ನ ಬಿಲದ ಮೇಲೆ ನಡೆಯುವ ನಿನಗೆ ಎಷ್ಟು ಉದ್ಧಟತನ! ನನ್ನ ವಿಚಾರದಲ್ಲಿ ಸ್ವಲ್ಪ ಎಚ್ಚರಿಕೆಯಿರಲಿ". ಹಣದ ಸಂಪಾದನೆ ಇರಲಿ, ಧರ್ಮದ ತಳಹದಿಯಿದ್ದು ನಿರಹಂಕಾರವಿರಲಿ. ಧನ ಸದ್ವಿನಿಯೋಗವಾಗಲಿ.

(ಡಾ|| ಪಿ. ಎಸ್. ನಾರಾಯಣರಾವ್ ಅವರ **'ನಡೆಮುಂದೆ'** ಪುಸ್ತಕದಿಂದ)

# ಸಾರ್ಥಕ ಜೀವನ

ಉಡುಪಿಕೃಷ್ಣ ಕುಲಕರ್ಣಿ
ಸಂಸ್ಕೃತ ಅಧ್ಯಾಪಕರು
ಸ್ವಾಮಿ ವಿವೇಕಾನಂದ ವಿದ್ಯಾಶಾಲೆ
ಪ್ರೌಢಶಾಲೆ

ಶ್ಲೋಕ: ಆತ್ಮಾನಂ ರಥಿನಂ ವಿದ್ಧಿ
ಶರೀರಂ ರಥಮೇವ ತು
ಬುದ್ಧಿಂ ತು ಸಾರಥಿಂ ವಿದ್ಧಿ
ಮನಃ ಪ್ರಗ್ರಹಮೇವ ಚ॥

ಇಂದ್ರಿಯಾಣಿ ಹಯಾನ್ ಆಹುಃ
ವಿಷಯಾನ್ ತೇಷು ಗೋಚರಾನ್
ಆತ್ಮೇಂದ್ರಿಯ ಮನೋಯುಕ್ತಂ
ಭೋಕ್ತೇತ್ಯಾಹುರ್ಮನೀಷಿಣಃ॥

ಅರ್ಥ: ಈ ಜೀವವಿರುವುದು ರಥಿಕನಾಗಿ
ರಥಿಕನಿಗೆ ಶರೀರವಿರುವುದು ರಥವಾಗಿ
ರಥಕ್ಕೆ ಬುದ್ಧಿಯಿರುವುದು ಸಾರಥಿಯಾಗಿ
ಸಾರಥಿಯಲ್ಲಿ ಮನಸ್ಸಿರುವುದು ಹಗ್ಗವಾಗಿ
ಹಗ್ಗಕ್ಕೆ ಇಂದ್ರಿಯಗಳಿರುವುವು ಕುದುರೆಗಳಾಗಿ
ಇಂದ್ರಿಯಗಳೆಂಬ ಕುದುರೆಗಳನ್ನು
ಮನವೆಂಬ ಹಗ್ಗದಿಂದ ಕಟ್ಟಿ
ಬುದ್ಧಿಯೆಂಬ ಸಾರಥಿಯ ಕೈಯಲ್ಲಿ ಕೊಟ್ಟರೆ
ಶರೀರವೆಂಬ ರಥವು ಸುಗಮವಾಗಿ ಸಾಗಿ
ಆತ್ಮವೆಂಬ ರಥಿಕನನ್ನು ಸನ್ಮಾರ್ಗದಲ್ಲಿ
ನಡೆಯುವಂತೆ ಮಾಡುವುದು.

ಉಪನಿಷತ್ತು ಹೇಳುತಿದೆ ಜೀವನವಿದೆಂದು
ಇದರಂತೆ ನಡೆಯಬೇಕು ನೀವೆಂದೆಂದೂ
ಅಂತಹ ಚೇತನವ ಕಾಣುತ್ತಿರುವೆವು ಇಂದು
ಕರೆವೆವು ಆ ಚೇತನವ ಕೃಷ್ಣಸ್ವಾಮಿ ಎಂದು

ಮನಸ್ಸು ದೇಹದಲ್ಲಿದ್ದರೆ ಮನುಷ್ಯ ಎಚ್ಚರವಾಗಿರುತ್ತಾನೆ
ಮನಸ್ಸು ಮನಸ್ಸಿನಲ್ಲಿದ್ದರೆ ಅಂತರ್ಮುಖಿಯಾಗಿರುತ್ತಾನೆ
ಮನಸ್ಸು ಕನಸಿನಲ್ಲಿದ್ದರೆ ಮನುಷ್ಯ ಮೈಮರೆಯುತ್ತಾನೆ
ಮೂರು ಹಂತದಲ್ಲಿ ಅಲ್ಲವೇ ಮನುಷ್ಯನಿಗೆ ನೂರು ವರ್ಷ?
ಕೃಷ್ಣಸ್ವಾಮಿಯವರಿಗೆ ಬರಲಿ ನೂರು ವರ್ಷದ ಹರುಷ.

* * * * *

# ನಮ್ಮ ಕೃಷ್ಣಸ್ವಾಮಿ

✍ ಬೆ. ಗೋ. ರಮೇಶ್

ಶ್ರೀ ಕೃಷ್ಣಸ್ವಾಮಿ, ನಾನು ಬಹುಕಾಲದ ಮಿತ್ರರು. ನನ್ನ ಹಿರಿಯ ಮಿತ್ರರಲ್ಲಿ ಕೃಷ್ಣಸ್ವಾಮಿ, ನೀಲತ್ತಹಳ್ಳಿ ಕಸ್ತೂರಿ, ಡಾ. ಹೊ. ಶ್ರೀನಿವಾಸಯ್ಯ, ಎಸ್. ಕೆ. ಮೋಹನ್ ಇವರೆಲ್ಲ ಮಲ್ಲೇಶ್ವರದ ಗಾಂಧೀ ಸಾಹಿತ್ಯ ಸಂಘದಲ್ಲಿ ಪ್ರತಿನಿತ್ಯ ಎನ್ನುವಂತೆ ನನಗೆ ಲಭ್ಯವಾಗುತ್ತಿದ್ದವರು. ಇಂದಿಗೂ ಆ ಲಭ್ಯತೆ ಇದ್ದೇ ಇದೆ. ನಾನು ಮಹಾತ್ಮಾ ಗಾಂಧೀಜಿಯವರನ್ನು ನೋಡಿಲ್ಲ. ಗಾಂಧೀಜಿ ತೀರಿ ಕೊಂಡಾಗ ನನಗೆ ಮೂರು ವರ್ಷ ವಯಸ್ಸು. ನಾನು ಬೆಳೆದಂತೆ ಗಾಂಧೀಜಿಯವರನ್ನು ನೋಡಿಲಿಲ್ಲವಲ್ಲ ಎಂದು ಕೊಳ್ಳುತ್ತಿದ್ದೆ. ಆದರೆ ಈ ಹಿರಿಯಮಿತ್ರರಲ್ಲಿ ಗಾಂಧೀಜಿ ಯವರನ್ನು ಕಾಣುವ ಸುಯೋಗ ನನ್ನದಾಯಿತು. ಈ ಸನ್ಮಿತ್ರರೆಲ್ಲ ಗಾಂಧೀವಾದಿಗಳು, ಗಾಂಧೀಪ್ರಿಯರು. ಕೃಷ್ಣಸ್ವಾಮಿಯವರಂತೂ ನನಗೆ ಒಬ್ಬ ಸಂತರಾಗೇ ಕಂಡ ವರು. ಅವರ ಸದಾ ಮುಗುಳ್ನಗೆಯಿಂದ ಹಾಗೂ ಅವರ ಸರಳತೆಯಿಂದ ಮಾರುಹೋಗಿದ್ದೇನೆ. ಗಾಂಧೀ ಸಾಹಿತ್ಯ ಸಂಘದ ಕಾರ್ಯಕ್ರಮಗಳಲ್ಲಿ ಅವರು ನಡೆಸಿಕೊಂಡುವ ಭಜನೆಕಾರ್ಯ ನನಗೆ ಸದಾ ಸತ್ಸಂಗಕ್ಕೆ ಪ್ರೇರಣೆಯಾಗಿದೆ ಎನ್ನಬೇಕು. ಅವರು ಹಾಡುವ 'ಜೀನೀ ಜೀನೀ ಬನೀ ಚದರಿಯಾ' ಎಂದು ಆರಂಭವಾಗುವ ಕಬೀರದಾಸರ ಪದ್ಯ ನನ್ನ ಕಿವಿಗಳಲ್ಲಿ ಸದಾ ರಿಂಗಣಿಸುತ್ತಿರುತ್ತದೆ. ಸುಶ್ರಾವ್ಯ ಗಾಯನ, ಭಕ್ತನ ಶ್ರದ್ಧೆ, ಏಕಾಗ್ರತೆ ಇವು ಕಿಟ್ಟಿಯವರ ಭಜನೆಗಳ ವೈಶಿಷ್ಟ್ಯ. ನಮಗೆಲ್ಲ ಕಿಟ್ಟಿ ಎಂದೇ ಅವರು ಪರಿಚಿತರು.

ನಂ. ಕೃಷ್ಣಸ್ವಾಮಿ ನಮ್ಮ ಕೃಷ್ಣಸ್ವಾಮಿ. ಅವರೊಬ್ಬ ಬಹುಮುಖ ಪ್ರತಿಭೆಯ ವ್ಯಕ್ತಿ. ಶಿಕ್ಷಣತಜ್ಞ, ಸಮಾಜ ಸೇವಕ, ಗಾಯಕ, ಬರಹಗಾರ, ಇಂಜಿನಿಯರ್ ಎಲ್ಲವೂ. ಕಿಟ್ಟಿಯವರನ್ನು ನಾನು ಬಹು ಹತ್ತಿರದಿಂದ ನೋಡುವ ಅವಕಾಶವಾದಾಗಲೆಲ್ಲ ಒಬ್ಬ ಸಂತರನ್ನು ಕಂಡಾಗ ಆಗುವ ಅನುಭವವಾಗಿದೆ. ಕಾರಣವಿಷ್ಟೆ, ಅವರಲ್ಲಿ ನಾನು ಕಂಡ ನಿಸ್ವಾರ್ಥತೆ. ಯಾರೊಬ್ಬರನ್ನೂ ನೋಯಿಸದ ಗುಣ. ಸಾತ್ವಿಕತೆ ಹಾಗೂ ಅವರು ಮಾತನಾಡುವಾಗ ಕಂಡು ಬರುವ ಮಾಧುರ್ಯ.

ಕೃಷ್ಣಸ್ವಾಮಿ ಒಬ್ಬ ಬರಹಗಾರರಾಗಿಯೂ ನಾಡಿಗೆ ಪರಿಚಿತರು. ಅವರು ಬರೆದುಕೊಟ್ಟ 'ಶೈತ್ಯೀಕರಣ ಹಾಗೂ ವಾಯು ನಿಯಂತ್ರಣ' ಎಂಬ ಪುಸ್ತಕವನ್ನು ಐ.ಬಿ.ಎಚ್. ಪ್ರಕಾಶನಕ್ಕಾಗಿ ಸಂಪಾದಿಸಿಕೊಂಡುವ ಅವಕಾಶ ನನಗೆ ಲಭ್ಯವಾದಾಗ ಅವರ ಬಳಿಗೆ ಎರಡೋ ಮೂರೋ ಬಾರಿ ಹೋಗಬೇಕಾಗಿ ಬಂದಿತು. ಆಗೆಲ್ಲ ಅವರು ನಾನು ಕಿರಿಯನೆಂದು ಯಾವತ್ತೂ ಕಾಣಲಿಲ್ಲ. ನನ್ನಲ್ಲಿ ಒಬ್ಬ ಸಮಾನನೆಂಬಂತೆ ಗೌರವದಿಂದ ಕಂಡರು. ಆ ವಿನಯ ಕಂಡು ಪರವಶನಾಗಿದ್ದೇನೆ. ಅವರು ಇಂಜಿನೀಯರಿಂಗ್ ವಿಷಯಗಳ ಕುರಿತು ಬರೆದಂತೆ ಸಾಹಿತ್ಯದ ಮೌಲ್ಯಗಳುಳ್ಳ ಲೇಖನಗಳನ್ನು, ಕೃತಿಗಳನ್ನು ರಚಿಸಿದರು. ಅವರ ಒಂದೊಂದು ಪುಸ್ತಕವನ್ನೂ ಓದಿದ್ದೇನೆ. ಸಾಕಷ್ಟು ವಿಷಯ ಗಳನ್ನು ಗ್ರಹಿಸಿದ್ದೇನೆ. ಇತ್ತೀಚಿಗೆ ಅವರ 'ಐನ್‌ಸ್ಟೈನ್' ಕುರಿತ ಒಂದು ಇಂಗ್ಲಿಷ್ ಪುಸ್ತಕ ಭಾರತೀಯ ವಿದ್ಯಾಭವನ ಗಾಂಧಿ ಅಧ್ಯಯನ ಕೇಂದ್ರ ಪ್ರಕಟಿಸಿತು. ಇದೊಂದು ಅಪ್ಪಟ ವಿಜ್ಞಾನ ಕೃತಿ. ಆದರೂ ವಿಜ್ಞಾನಿ ಐನ್‌ಸ್ಟೈನ್ ಅವರಿಗೆ ಮಹಾತ್ಮಗಾಂಧಿಯವರಲ್ಲಿದ್ದ ಗೌರವ ಆದರ ಗಳನ್ನು ಪರಿಚಯಿಸುವ ಒಂದು ಲೇಖನವೂ ಇಲ್ಲಿದೆ. ಐನ್‌ಸ್ಟೈನ್ ಗಾಂಧೀಜಿಯವರ ಆರಾಧಕರೇ ಆಗಿದ್ದರು ಎಂಬುದು ಇಲ್ಲಿ ತಿಳಿದುಬರುವ ಮುಖ್ಯ ಅಂಶ.

ಕಿಟ್ಟಿಯವರು 'ಮಹಾರಾಷ್ಟ್ರದ ಸಂತರು' ಎಂಬ ಒಂದು ಅನುವಾದ ಕೃತಿ ಬರೆದಿದ್ದಾರೆ. ಇದು ಅವರ ಸಂತರಂತಹ ಜೀವನಕ್ಕೆ ದ್ಯೋತಕವಾಗಿದೆ ಎನ್ನಬಹುದು. ಹಾಗೆಯೇ 'ಸಂತ ವಿನೋಬಾ — ನೂರುಮುಖಗಳು' ಕೃತಿ ಸಹ ಅವರದೇ. ಗಾಂಧೀಜಿ ಕುರಿತ ಅವರ ಕೃತಿ ಮನೋಜ್ಞ.

ನನ್ನ ಜೀವನದಲ್ಲಿ ಕೃಷ್ಣಸ್ವಾಮಿಯವರ ಸಂಪರ್ಕ ಲಭಿಸಿದ್ದು ಭಾಗ್ಯ ಎಂದು ತಿಳಿದಿದ್ದೇನೆ. ನಾನು ಕಿರಿಯ. ನಮ್ಮ ತಂದೆ-ತಾಯಿ, ನಮ್ಮ ದೇವರು ಎಂದೆಲ್ಲ ನಾವು ಹೇಳುವಂತೆ ನಾನಾದರೂ 'ನಮ್ಮ ಕೃಷ್ಣಸ್ವಾಮಿ' ಎಂದು ಹೇಳುತ್ತೇನೆ. ಅವರಿಗೆ ಅರವತ್ತು ತುಂಬಿದಾಗಲೂ ನಡೆದ ಶಾಂತಿ ಸಮಾರಂಭದಲ್ಲಿ ಭಾಗವಹಿಸಿದ್ದೆ. ಈಗ ಅವರಿಗೆ ಎಂಬತ್ತು. ಶತಾಯುಷಿಗಳಾಗಿ ಬಾಳಿ ಈ ನಾಡಿಗೆ ಇನ್ನಷ್ಟು ಕೊಡುಗೆಗಳನ್ನು ನೀಡುವಂತಾಗಲಿ ಎಂದು ಶ್ರೀದೇವರಲ್ಲಿ ಪ್ರಾರ್ಥಿಸುತ್ತೇನೆ. ❐

# ಸತ್ಪುರುಷರು

✍ ಡಿ. ವೆಂಕಟೇಶ್ ಮೂರ್ತಿ

**ಒಂದು** ಸಾವಿರ ವರ್ಷಗಳ ಹಿಂದೆಯೇ ಭರ್ತೃಹರಿ ಎಂಬ ರಾಜಕವಿಯು ಮಾನವರ ಸ್ವಭಾವವನ್ನು, ಅವರ ನಡೆನುಡಿಯನ್ನು ನಾಲ್ಕು ವರ್ಗಗಳಾಗಿ ವಿಂಗಡಿಸಿದ್ದಾನೆ.

*ಪರಹಿತಕ್ಕಾಗಿ ದುಡಿಯುವವರು*
*ಸ್ವಹಿತವ ಚಿಂತಿಸದ ಸತ್ಪುರುಷರು*
*ಪರಹಿತವ ಚಿಂತಿಪರು*
*ಸ್ವಹಿತಕಡ್ಡಿಯಿಲ್ಲದೊಡೆ ಸಾಮಾನ್ಯರು*
*ಪರಹಿತವ ಬಲಿಕೊಡುತೆ*
*ಸ್ವಹಿತವ ಸಾಧಿಪರು ಮಾನವ ರಾಕ್ಷಸರು*
*ಪರಹಿತವ ನಿರರ್ಥಕದಿ*
*ಬಲಿಕೊಡುವವರನೇನೆಂಬುದೆ ಅರಿಯದದು.*

ಕೆಲವು ಸತ್ಪುರುಷರು ತಮ್ಮ ಸ್ವಾರ್ಥದ ಹಿತಾಹಿತಗಳ ಚಿಂತನೆಯೇ ಇಲ್ಲದೆ ಪರರ ಹಿತಕ್ಕಾಗಿ ದುಡಿಯಲು ತಮ್ಮನ್ನು ಸಮರ್ಪಿಸಿಕೊಳ್ಳುತ್ತಾರೆ. ಇತರೆ ಸಾಮಾನ್ಯ ಜನರು ತಮ್ಮ ಸ್ವಾರ್ಥಸುಖಕ್ಕೆ ಹಿತಾಹಿತಗಳಿಗೆ ಧಕ್ಕೆ ಬಾರದಿದ್ದಲ್ಲಿ ಇತರರ ಹಿತಕ್ಕಾಗಿ ಶ್ರಮಿಸಲು ಸಿದ್ಧರಾಗಿರುತ್ತಾರೆ. ಮಾನವ ರಾಕ್ಷಸರೆಂದು ಕರೆಯಲ್ಪಡುವ ಮೂರನೆಯ ವರ್ಗಕ್ಕೆ ಸೇರಿದವರು ಇತರರ ಹಿತಕ್ಕೆ ಧಕ್ಕೆಯನ್ನುಂಟುಮಾಡಿ ತಮ್ಮ ಸ್ವಾರ್ಥಸುಖವನ್ನು ಸಾಧಿಸುತ್ತಾರೆ. ಇದಲ್ಲದೆ ಯಾವ ಹೆಸರಿನಿಂದ ಕರೆಯಬೇಕೆಂದು ತೀರ್ಮಾನಿಸಲು ಸಾಧ್ಯವಾಗದ ನಾಲ್ಕನೆಯ ವರ್ಗ ಒಂದಿದೆ. ಅವರುಗಳು ತಮಗೆ ಯಾವ ಪ್ರಯೋಜನವಿಲ್ಲದಿದ್ದರೂ ಇತರರ ಹಿತಕ್ಕೆ ಮಾರಕವಾಗುವಂತೆ ನಡೆದುಕೊಳ್ಳುತ್ತಾರೆ. ಇವರನ್ನು ಯಾವ ಹೆಸರಿನಿಂದ ಕರೆಯಬೇಕೆಂಬುದೇ ಕವಿಗೆ ಜಿಜ್ಞಾಸೆಯಾಗಿದೆ.

ಮೊದಲನೆಯ ವರ್ಗಕ್ಕೆ ಸೇರಿದ ಸತ್ಪುರುಷರು ಉತ್ತಮಗುಣದ ಮನುಷ್ಯರು. ಅವರಲ್ಲಿರುವ ಉತ್ಕೃಷ್ಟ ಗುಣಗಳಾವುವು? ಸ್ವಾರ್ಥಸಾಧಕ ಬುದ್ಧಿಯೇ ಇಲ್ಲದಂತಹ ನಡೆನುಡಿ. ಸ್ವಾರ್ಥ ಚಿಂತನೆಯೇ ಇಲ್ಲದೆ ಇತರರಿಗೆ ಒಳ್ಳೆಯದನ್ನು ಮಾಡುವುದೇ ಅವರ ಸ್ವಭಾವ. ಯಾವುದೇ ಸಮಾಜದಲ್ಲಿ ಇವರೇ ಅತ್ಯುತ್ತಮ ವರ್ಗಕ್ಕೆ ಸೇರಿದವರು ಮತ್ತು ಇವರಿಂದಲೇ ಸಮಾಜಕ್ಕೊಂದು ಘನತೆ ಗೌರವಗಳು ದೊರೆಯುತ್ತವೆ. ಎಲ್ಲ ದೇಶದಲ್ಲಿಯೂ ಎಲ್ಲ ಕಾಲದಲ್ಲಿಯೂ ಕೆಲವು ಸತ್ಪುತ್ರರು ಹುಟ್ಟಿ ಸಮಾಜದ ಶ್ರೇಯೋಭಿವೃದ್ಧಿಗಾಗಿ ದುಡಿಯುತ್ತಾರೆ.

ಸಾಮಾನ್ಯವರ್ಗಕ್ಕೆ ಸೇರಿದವರೇ ಎಲ್ಲ ಸಮಾಜದಲ್ಲಿಯೂ ಅಧಿಕ ಸಂಖ್ಯೆಯಲ್ಲಿರುತ್ತಾರೆ. ತಮ್ಮ ಹಿತಕ್ಕೆ ತೊಂದರೆಯಾಗದಿದ್ದಲ್ಲಿ, ಇತರರ ಹಿತಕ್ಕಾಗಿ ಶ್ರಮಿಸಲು ಸಿದ್ಧರಾಗಿರುತ್ತಾರೆ. ಇವರುಗಳನ್ನು ಪ್ರಜ್ಞೆಯುಳ್ಳ ಸ್ವಹಿತ ಸಾಧಕರೆಂದು ಕರೆಯುತ್ತಾರೆ. ಇವರು ಪರಹಿತ ಸಾಧನೆಯಲ್ಲಿಯೇ, ತಮ್ಮಗಳ ಸ್ವಹಿತವೂ ಅಡಗಿದೆ ಎಂಬುದನ್ನು ಅರಿಯಬೇಕು. ಒಬ್ಬರು ಮತ್ತೊಬ್ಬರನ್ನು ಆಶ್ರಯಿಸಿ ಸಮಾಜದಲ್ಲಿ ಬದುಕಬೇಕಾದುದ್ದು ಅನಿವಾರ್ಯವೆಂಬ ಸತ್ಯವನ್ನು ಎಲ್ಲರೂ ಅರಿತು ಅದರಂತೆ ಎಲ್ಲರ ಹಿತಕ್ಕಾಗಿ ದುಡಿಯಬೇಕಾಗುತ್ತದೆ. ಪರರ ಹಿತಕ್ಕೆ ಧಕ್ಕೆಯಾಗದಂತೆ, ಪರರ ಹಿತವೂ ರಕ್ಷಿಸಲ್ಪಡುವಂತೆ ತಮ್ಮ ಹಿತವನ್ನೂ ಕಾಪಾಡಿಕೊಳ್ಳುವಂತೆ ಇವರ ನಡೆನುಡಿ ಇರತಕ್ಕದ್ದು.

ಎಲ್ಲ ಕಡೆಯಲ್ಲಿಯೂ ಸ್ವಚ್ಛತೆಯನ್ನು ಕಾಪಾಡಿಕೊಳ್ಳದೆ ತಮ್ಮ ಮನೆಯನ್ನು ಸ್ವಚ್ಛಗೊಳಿಸಿದರೆ ಯಾವ ಉಪಯೋಗವೂ ಇಲ್ಲ. ಸುತ್ತಮುತ್ತಲ ಪರಿಸರ ಮಲಿನವಾದಲ್ಲಿ ಸಾಂಕ್ರಾಮಿಕ ರೋಗವು ತಮಗೂ ಹರಡಬಹುದು ಎಂಬ ಸತ್ಯದ ಅರಿವಿದ್ದು ತಮ್ಮ ಮನೆಯ ಅಂಗಳವನ್ನು ಸ್ವಚ್ಛಗೊಳಿಸುವುದರ ಜೊತೆ ಜೊತೆಗೇ ತಮ್ಮ ಸುತ್ತಮುತ್ತಲಿನ ಪರಿಸರವನ್ನು ಶುಚಿಗೊಳಿಸಬೇಕಾದುದ್ದು ಅನಿವಾರ್ಯ. ಸಾಮಾನ್ಯ ಸ್ವಾರ್ಥ ಬಯಕೆಗಳು ಉದಾತ್ತ ಸ್ವಾರ್ಥದ ಸ್ಥಿತಿಗೆ ಎತ್ತರಿಸಲೇಬೇಕಾದುದ್ದು ಅನಿವಾರ್ಯವಾಗುತ್ತದೆ.

ಮೂರನೆಯ ವರ್ಗಕ್ಕೆ ಸೇರಿದ ಮಾನವ ರಾಕ್ಷಸರ ಸ್ವಭಾವವೇನು?

ಇತರರ ಹಿತಕ್ಕೆ ಮಾರಕವಾದರೂ ಸರಿಯೇ, ಎಂಬ ಕೀಳುಭಾವವನ್ನು ಹೊಂದಿ ಇವರಗಳು ತಮ್ಮ ಮತ್ತು ತಮ್ಮವರ ಸ್ವಾರ್ಥಸುಖದ ಕಡೆಯೇ ಗಮನಹರಿಸುತ್ತಾರೆ. ದೇಶಕ್ಕಾಗುವ ಹಾನಿಯ ಬಗೆಯಾಗಲಿ ಇಲ್ಲವೆ ಸಮಾಜದ ಹಿತಕ್ಕಾಗುವ ಹಾನಿಯನ್ನಾಗಲಿ ಇವರು ಎಂದಿಗೂ ಗಮನಿಸುವುದೇ ಇಲ್ಲ. ಅದರ ಚಿಂತೆಯೇ ಇವರ ಮನಸ್ಸಿನಲ್ಲಿ ಸುಳಿಯುವುದೇ ಇಲ್ಲ. ಭ್ರಷ್ಟ ರಾಜಕಾರಣಿಗಳು, ಅಧಿಕಾರಿಗಳು ಮತ್ತು ವ್ಯಾಪಾರಸ್ಥರು ಈ ವರ್ಗಕ್ಕೆ ಸೇರಿದವರಾಗಿರುತ್ತಾರೆ. ಲಂಚರುಶುವತ್ತುಗಳಿಗೆ ಕೈಯೊಡ್ಡಿ ದೇಶದ ಹಿತವನ್ನೇ ಬಲಿಕೊಡಲು ಸಿದ್ಧರಾಗಿರುವ ಅನೇಕರಿದ್ದಾರೆ; ಊಟಕ್ಕೆ ಬಳಸುವ ಪದಾರ್ಥಗಳಿಗೆ ಕಲ್ಲು ಮಣ್ಣು ಮತ್ತಿತರ ಪದಾರ್ಥಗಳನ್ನು ಬೆರೆಸಿ ಲಾಭ ಗಳಿಸುವ ಖದೀಮರಿದ್ದಾರೆ. ಕಳಪೆಗುಣಮಟ್ಟದ ಔಷಧಿಗಳನ್ನು ತಯಾರಿಸಿ ಅನೇಕರ ಸಾವು ನೋವಿಗೆ ಕಾರಣರಾಗಿ ತಮಗೆ ದೊರಕುತ್ತಿರುವ ಲಾಭಕ್ಕಾಗಿ ಬಾಯಿಬಿಡುತ್ತಿರುವ ಪಾಪಿಗಳಿದ್ದಾರೆ. ಪ್ರಾಣಾಪಾಯವಾಗಬಹುದಾದ ಕಳಪೆ ದರ್ಜೆಯ ಉಪಕರಣಗಳನ್ನು ತಯಾರಿಸಿ ಮಾರುವ ಮಂದಿಗೆ ರಾಕ್ಷಸರೆಂದು ಕರೆಯದೆ ಬೇರೇನು ಕರೆಯಲು ಸಾಧ್ಯ? ತಮ್ಮ ಸ್ವಾರ್ಥಸುಖಕ್ಕಾಗಿ ಧನಕನಕಗಳನ್ನು ಸಂಗ್ರಹಿಸುತ್ತಾ ಸಮಾಜದ ಸಾವಿರಾರು ಜನರ ಸಾವು ನೋವಿಗೆ ಕಾರಣರಾಗುವ ಈ ನೀಚ ಜನರನ್ನು ಮಾನವ ರಾಕ್ಷಸರೆನ್ನದೆ ಬೇರೇನು ಕರೆಯಲು ಸಾಧ್ಯ? ಕುಕೃತ್ಯಗಳಲ್ಲಿಯೇ ಮನಸ್ಸನ್ನು ನೆಟ್ಟು ದುರ್ಮಾರ್ಗಪ್ರವೃತ್ತಿಯುಳ್ಳ ಕೀಳುಜನರನ್ನು ಮಾನವ ರಾಕ್ಷಸರೆನ್ನದೆ ಬೇರೇನು ಕರೆಯಲು ಸಾಧ್ಯ? ಇವರಲ್ಲಿ ಕೆಲವರನ್ನಾದರೂ ಸರ್ಕಾರದ ಮತ್ತು ಸಮಾಜದ ಪ್ರಯತ್ನದಿಂದ ಉದಾತ್ತ ಸ್ವಾರ್ಥಹಿತ ಸಾಧಕರ ಮಟ್ಟಕ್ಕೇರಿಸುವ ಪ್ರಯತ್ನವನ್ನು ಮಾಡಲೇಬೇಕಾಗುತ್ತದೆ. ಕೆಲವರಾದರೂ ಸನ್ಮಾರ್ಗದ ಕಡೆ ಒಲಿಯುವುದು ಸಾಧ್ಯವಾಗಬಹುದು; ಸಮಾಜದ ಹಿತ ದೃಷ್ಟಿಯಿಂದ ಇದು ಅನಿವಾರ್ಯ.

ನಾಲ್ಕನೆಯ ವರ್ಗದ ಜನರ ಮನೋಭಾವವನ್ನು ಅರ್ಥಮಾಡಿಕೊಳ್ಳುವುದೇ ಕಷ್ಟ. ತಮ್ಮ ಸ್ವಹಿತವನ್ನು ಸಾಧಿಸುವುದು ಬೇಕಿಲ್ಲದಿದ್ದರೂ ಇತರರಿಗೆ ಕಷ್ಟನಷ್ಟಗಳನ್ನು ಕೊಡುವ ಜನರಿಗೆ ಏನೆಂದು ಕರೆಯುವುದು? ವಿನಾಶಪ್ರವೃತ್ತಿಯ ಈ ದುಷ್ಟಜನರನ್ನು ಏನೆಂದು ಕರೆಯುವುದು? ಅಸುರೀ ಪ್ರವೃತ್ತಿಯನ್ನು ಮೀರಿದ ಈ ನೀಚಜನರನ್ನು ಹೆಸರಿಸುವುದಾದರೂ ಹೇಗೆ? ಎಲ್ಲ ಸಮಾಜದಲ್ಲಿಯೂ ಇಂತಹ ಪ್ರವೃತ್ತಿಯುಳ್ಳ ಜನರು ಕೆಲವರಾದರೂ ಇದ್ದೇ ಇರುತ್ತಾರೆ. ಸಮಾಜ ಮತ್ತು ಸರ್ಕಾರ ಖಚಿತ ಕ್ರಮಗಳನ್ನು ಕೈಗೊಂಡು ಈ ಜನರ ಪ್ರವೃತ್ತಿಯನ್ನು ಹದ್ದುಬಸ್ತಿನಲ್ಲಿಡಬೇಕು. ಇಲ್ಲದಿದ್ದಲ್ಲಿ ಸಮಾಜಘಾತುಕರಿಂದ ಮಾನಹಾನಿ ಪ್ರಾಣಹಾನಿಗಳು ನಿರಂತರವಾಗಿ ಮುಂದುವರಿಯುತ್ತಲೇ ಹೋಗುತ್ತವೆ.

ಈ ನಾಲ್ಕು ಪ್ರವರ್ಗಕ್ಕೆ ಸೇರಿದ ಮಾನವರು ಎಲ್ಲ ದೇಶ ಕಾಲಗಳಲ್ಲಿಯೂ ಇದ್ದೇ ಇರುತ್ತಾರೆ. ಸತ್ಪುರುಷರು ಮತ್ತು ಪ್ರಜ್ಞಾವಂತ ಸ್ವಹಿತಾಕಾಂಕ್ಷಿಗಳು ಅಧಿಕವಾಗಿದ್ದಲ್ಲಿ ಆ ಸಮಾಜದಲ್ಲಿ ಶಾಂತಿ ಸುಖಗಳು ನೆಲೆಸಿರುತ್ತವೆ. ಮಾನವ ರಾಕ್ಷಸರು ಮತ್ತು ಮನುಜಕುಲಕ್ಕೆ ಕಳಂಕಪ್ರಾಯರಾದ ಅಧಮಾಧಮರು ಅಧಿಕವಾಗಿದ್ದಲ್ಲಿ ಆ ಸಮಾಜದಲ್ಲಿ ದುಃಖನೋವುಗಳೇ ಅಧಿಕವಾಗಿರುವುದರಲ್ಲಿ ಅನುಮಾನವಿಲ್ಲ. ದುಷ್ಟನಿಗ್ರಹ ಶಿಷ್ಟರಕ್ಷಣಕಾರ್ಯವು ನಿರಂತರವಾಗಿ ನಡೆಯುತ್ತಿರಲೇಬೇಕು; ಸಮಾಜದ ಹಿತದೃಷ್ಟಿಯಿಂದ ಇದು ಅನಿವಾರ್ಯವಾದ ಕಾರ್ಯವಾಗಿದೆ.

ಸದಾ ಭಗವಂತನ ನಾಮಸಂಕೀರ್ತನೆಯನ್ನು ಹಾಡುತ್ತ ಪಾಡುತ್ತ ಸತ್ಸಂಗದಲ್ಲಿ ತಲ್ಲೀನರಾಗಿ ಭಜನೆ, ಭಾಷಣ ಮತ್ತು ಪುಸ್ತಕಗಳ ಮೂಲಕವಾಗಿ ತಮ್ಮ ಸಂಪರ್ಕಕ್ಕೆ ಬಂದಿರುವ, ಬರುತ್ತಿರುವ ಜನರನ್ನು ಸನ್ಮಾರ್ಗದಲ್ಲಿ ಮುನ್ನೆಡೆಯುವಂತೆ ಪ್ರೇರೇಪಿಸುತ್ತಿರುವ, ತಮ್ಮನ್ನು ಸಮಾಜಸೇವೆಯಲ್ಲಿಯೇ ತೊಡಗಿಸಿಕೊಂಡಿರುವ ಶ್ರೀಮಾನ್ ಕೃಷ್ಣಸ್ವಾಮಿಗಳು ಸತ್ಪುರುಷರ ಎಲ್ಲ ಲಕ್ಷಣಗಳನ್ನು ಹೊಂದಿ ಸಕಲಸದ್ಗುಣಸಂಪನ್ನರಾಗಿ ನಮ್ಮಗಳೆಲ್ಲರ ಪಾಲಿಗೆ ಸತ್ಪುರುಷರೇ ಆಗಿದ್ದಾರೆ. ಇಂತಹ ಈ ಪರಿಪೂರ್ಣ ಪುರುಷರು ಇಂದು ಎಂಬತ್ತು ವಸಂತಗಳನ್ನು ಪೂರ್ಣಗೊಳಿಸಿದ ಈ ಶುಭ ಸಂದರ್ಭದಲ್ಲಿ ಅನೇಕ ವರ್ಷಗಳಿಂದ ಅವರೊಡನೆ ನಿಕಟಸಂಪರ್ಕವನ್ನು ಹೊಂದಿರುವ ಸೇವಾಶ್ರಮದ ಮತ್ತು ವಿದ್ಯಾಶಾಲೆಯ

ಸ್ವಯಂಸೇವಕರ ಪರವಾಗಿ ಅವರಿಗೆ ಶುಭವನ್ನು ಕೋರುತ್ತೇನೆ. ಶ್ರೀಮಾನ್ ಕೃಷ್ಣಸ್ವಾಮಿಗಳು ಆಯಸ್ಸು ಆರೋಗ್ಯ ಭಾಗ್ಯಗಳೆಲ್ಲವನ್ನೂ ಹೊಂದಿ, ನೂರು ವರ್ಷಗಳು ಸತ್‌ಚಿಂತನೆಯಲ್ಲಿ ಸುಖಮಯ ಬದುಕನ್ನು ಕರುಣಿಸೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ. ಅವರ ಸದಾಶಯದಂತೆ ಶ್ರೀವಿವೇಕಾನಂದ ಸೇವಾಶ್ರಮ ಮತ್ತು ಸ್ವಾಮಿ ವಿವೇಕಾನಂದ ವಿದ್ಯಾಶಾಲೆಗಳು ಅಭಿವೃದ್ಧಿಹೊಂದಿ ಸಹಸ್ರಾರು ಜನರಿಗೆ ಸೇವೆ ಸಲ್ಲಿಸುವಂತೆ ಆದಲ್ಲಿ ಅವರು ಈ ಸಂಸ್ಥೆಗಳ ಅಭಿವೃದ್ಧಿಗೆ ಪಟ್ಟ ಶ್ರಮ ಸಾರ್ಥಕವಾಗಿ ಅವರ ಹೆಸರು ಚಿರಸ್ಥಾಯಿಯಾಗುಳಿಯುವಂತಾಗಲೆಂದು ಮತ್ತೊಮ್ಮೆ ಭಗವಂತನಲ್ಲಿ ಪ್ರಾರ್ಥಸುತ್ತೇನೆ.

———— o ————

*ಸೂಚನೆ : ಪರಮ ಪೂಜ್ಯರಾದ ಶ್ರೀಮತ್ ಸ್ವಾಮಿ ರಂಗನಾಥಾನಂದರು ಎಪ್ರಿಲ್ ಮಾಹೆ ಎರಡನೆಯ ತೇದಿ ಸಾವಿರದ ಒಂಬೈನೂರು ಅರವತ್ತೆಂಟನೆಯ ಇಸವಿಯಲ್ಲಿ ಮಾಡಿದ ಭಾಷಣದ ಭಾವಾನುವಾದವನ್ನು ಅನುಸರಿಸಿ ರಚಿಸಿಲಾಗಿದೆ. ಸ್ವಾಮಿಜೀಯವರ ಪ್ರಕಟಿತ ಪುಸ್ತಕ 'Philosophy of Service' ಎಂಬ ಪುಸ್ತಕದಿಂದ ಪೂರ್ಣಪರಿಪಾಠವನ್ನು ಓದಬಹುದು.*

* * * * *



---

ವ್ಯಕ್ತಿಯೊಬ್ಬ ಅನೇಕ ಜನ್ಮಗಳ ತಪಸ್ಸಿನ ಫಲವಾಗಿಯೇ ಸರಳನಾಗುವುದು.

* * *

ನೀನು ಸತ್ಪುರುಷನಾಗಬೇಕೆಂದಿದ್ದರೆ ನಮ್ರನಾಗು, ವಿನಯವಂತನಾಗು.

* * *

ಅಹಂಕಾರಕ್ಕೆ ಎಡೆಗೊಡಬಾರದು. ಭಾಷಣ ಮಾಡುವವರಲ್ಲಿ "ನಾನು ಇತರರಿಗೆ ಬೋಧನೆ ಮಾಡುತ್ತಿದ್ದೇನೆ" ಎಂಬ ಈ ಬಗೆಯ ಅಹಂಭಾವವಿರುವುದು ಒಳ್ಳೆಯದಲ್ಲ. ಅಹಂಕಾರ ಹುಟ್ಟುವುದು ಅಜ್ಞಾನದಿಂದಾಗಿ. ಜ್ಞಾನ ದೊರಕಬೇಕಾದರೆ ವ್ಯಕ್ತಿಯ ಅಹಂಕಾರ ಕರಗಿರಬೇಕಾಗುತ್ತದೆ. ಮಳೆನೀರು ತಗ್ಗು ಪ್ರದೇಶಕ್ಕೆ ಹರಿದುಬರುತ್ತದೆ. ಆದರೆ ದಿಣ್ಣೆ ಪ್ರದೇಶದಿಂದ ಇಳಿದುಹೋಗುತ್ತದೆ!

* * *

ನಿನ್ನೊಳಗೆ ಹಮ್ಮು ಉದಿಸಿದಾಗ ಹೀಗೆ ಭಾವಿಸು : 'ನಾನು ಭಗವಂತನ ದಾಸ, ಭಗವಂತನ ಮಗು' ಎಂದು. ಈ ವಿಧವಾಗಿ ಹೆಮ್ಮೆಪಡುವುದರಲ್ಲಿ ಅಪಾಯವಿಲ್ಲ. ಮಹಾತ್ಮರು ಯಾವಾಗಲೂ ಮಕ್ಕಳಂತಿರುತ್ತಾರೆ. ಆದ್ದರಿಂದ ಸಹಜವಾಗಿಯೇ ಅವರಲ್ಲಿ ಅಹಂಭಾವವಿರುವುದಿಲ್ಲ.

* * *

ನಿಷ್ಕಪಟ ಹೃದಯ ಹಾಗೂ ಸರಳ ಶ್ರದ್ಧೆ — ಇವುಗಳೇ ನಮ್ಮನ್ನು ಭಗವಂತನೆಡೆಗೆ ಒಯ್ಯುವ ಮಾರ್ಗಗಳು.

**- ಶ್ರೀರಾಮಕೃಷ್ಣ**

# ನನ್ನ ತಮ್ಮ ಕಿಟ್ಟಿ

✍ ಸಾವಿತ್ರಿ ಶ್ರೀಕಂಠಯ್ಯ

ನನ್ನ ತಮ್ಮ ಕಿಟ್ಟಿಗೆ 80 ವರ್ಷ! ಹೌದು ಅವನು ನನಗಿಂತ ಎರಡು ವರ್ಷ ಚಿಕ್ಕವನು. ವಯಸ್ಸಿನಲ್ಲಷ್ಟೇ ಚಿಕ್ಕವನು, ಇನ್ನೆಲ್ಲದರಲ್ಲಿಯೂ ಅವನು ಬಹಳ ದೊಡ್ಡವನಾಗಿ ಬೆಳೆದಿದ್ದಾನೆ. ವಿದ್ಯೆ, ನಡತೆ, ದಾನ, ಹಾಡು, ದೇಶಭಕ್ತಿ. ಎಲ್ಲದರಲ್ಲೂ ಬಹಳ ಮುಂದಿದ್ದಾನೆ. ಇಂಥ ತಮ್ಮನಿಗೆ ಅಕ್ಕ ಎನ್ನಿಸಿಕೊಳ್ಳುವುದೇ ನನಗೆ ಹೆಮ್ಮೆ!

ನಮ್ಮದು ಮಧ್ಯಮವರ್ಗದ ದೊಡ್ಡ ಕುಟುಂಬ. ನಮ್ಮ ತಂದೆ ನ್ಯಾಯಕ್ಕಾಗಿ ಹೊಡೆದಾಡುವಂಥ ಲಾಯರು. ಜೀವನನಿರ್ವಹಣೆ (ನಾವು ಚಿಕ್ಕವರಾಗಿದ್ದಾಗ) ಅಹನ್ಯಹನಿ ಕಾಲಕ್ಷೇಪ ಎಂತಲೇ ಹೇಳಬಹುದು. ನಾವು ಕಾಡು ಮಲ್ಲೇಶ್ವರದಲ್ಲಿದ್ದ ಪಾಪರ್‌ತೊಟ್ಟಿ ಸ್ಕೂಲಿಗೆ ಒಟ್ಟಿಗೆ ಹೋಗುತ್ತಿದ್ದೆವು. ನಮ್ಮ ವಾಸ ಚಿಕ್ಕಜ್ಜಿ ಮೀನಾಮಣಿ ಅಮ್ಮನವರ ಮನೆ ಔಟ್‌ಹೌಸಿನಲ್ಲಿ. ಆದರೆ ಆಟ ಆಡಲು, ಹೂವು ಕಿತ್ತು, ಹಣ್ಣು ತಿಂದು ಮಜಾಮಾಡಲು ದೊಡ್ಡ ಕಾಂಪೌಂಡು. ಅಲ್ಲಿ ಸಾಲದೆಂದು, ಸುತ್ತಮುತ್ತಲ ಬಂಗಲೆಗಳಿಗೂ ನನ್ನ ತಮ್ಮ ಕಿಟ್ಟಿ, ಪಾಪು (ಎಸ್. ಎನ್. ಸುಬ್ಬರಾವ್) ಪಾದರಿ ಹೂ ಆಯಲು, ಕಾಯಿ ಕಸರು ಕಿತ್ತುತಿನ್ನಲು ಹೋಗುತ್ತಿದ್ದೆವು. ಹಾಗೆ ಹೋದಾಗೊಮ್ಮೆ ತಮ್ಮಂದಿರನ್ನು ಅಚಾನಕ್ಕಾಗಿ ಬಂದ ಮಳೆಯಲ್ಲಿ ನೆನೆಸಿಕೊಂಡು ಬಂದು ನಮ್ಮಪ್ಪನ ಹತ್ತಿರ ಏಟು ತಿಂದಿದ್ದೆ (ಅವರಿಗೆ ಮಳೆಯಲ್ಲಿ ನೆಂದರೆ ಬಹಳ ಕೋಪ). ಆಗ ರೇಶನ್ ಕಾಲ. ಅಕ್ಕಿ, ಗೋಧಿ, ಸೌದೆ ಎಲ್ಲ ರೇಶನ್‌ನಲ್ಲಿ ತಂದರೆ ಉಂಟು. ಸೌದೆ ದಿಮ್ಮಿಗಳನ್ನು ಕ್ಯೂನಲ್ಲಿ ನಿಂತು ಹೊತ್ತುತಂದು ನನ್ನ ತಮ್ಮಂದಿರು ಕೊಡಲಿಯಿಂದ ಒಡೆಯುತ್ತಿದ್ದರು. ಹಾಗೆಂದು ಪಾಠದಲ್ಲೆಂದೂ ಹಿಂದೆ ಇರಲಿಲ್ಲ. ಒಳ್ಳೆಯ ಫಲಿತಾಂಶವೇ ಬರುತ್ತಿತ್ತು. ಹೈಸ್ಕೂಲಿನಲ್ಲಿದ್ದಾಗಲೇ ಕಿಟ್ಟಿ, ಪಾಪು ಎಲ್ಲರಿಗೂ ಗಾಂಧೀಜಿಯವರ ಪ್ರಭಾವದಿಂದ ಮನೆಯ ಹತ್ತಿರ ಇದ್ದ ಸಿದ್ದವನಹಳ್ಳಿ ಕೃಷ್ಣಶರ್ಮರ ಸಹವಾಸ, ಬೋಧನೆಗಳಿಂದ ಸ್ವಾತಂತ್ರ್ಯದ ಸಂಗ್ರಾಮದಲ್ಲಿ ಭಾಗವಹಿಸುವ ಇಚ್ಛೆ ಇತ್ತು. ಆಗಲೇ ಶ್ರೀರಾಮಕೃಷ್ಣಪರಮಹಂಸರ ಆಶ್ರಮ ಸಂಪರ್ಕವೂ ಬಂದು ದೇಶಭಕ್ತಿಗೀತೆಗಳನ್ನೂ, ಭಜನೆಗಳನ್ನೂ ಸುಶ್ರಾವ್ಯವಾಗಿ ಹಾಡುತ್ತಿದ್ದರು. ಮಲ್ಲೇಶ್ವರದ ರೀಡಿಂಗ್ ರೂಂ ಪಕ್ಕದ ಬಿಲ್ಡಿಂಗ್‌ನಲ್ಲಿ ಪ್ರತಿ ಶುಕ್ರವಾರ ಪ್ರಾರ್ಥನಾ ಸಭೆಗಳನ್ನು ನಡೆಸುತ್ತಿದ್ದರು. ಅನೇಕರು ತಪ್ಪದೆ ಬಂದು ಭಾಗವಹಿಸುತ್ತಿದ್ದರು. ಆಗಲೇ ನಮ್ಮಣ್ಣ ಚಂದ್ರು (ಎಸ್. ಎನ್. ಚಂದ್ರಶೇಖರ್) ಕಿಟ್ಟಿ, ಪಾಪು ಖಾದಿಧರಿಸಲು ಪ್ರಾರಂಭಿಸಿದರು. ಇಂದಿನವರೆಗೂ ಮೂವರೂ ಖಾದಿ ಬಿಟ್ಟು ಬೇರೆ ಬಟ್ಟೆಗಳನ್ನು ಉಪಯೋಗಿಸುವುದಿಲ್ಲ. ಚಿಕ್ಕ ವಯಸ್ಸಿನಲ್ಲೇ ಕಿಟ್ಟಿ, ಪಾಪು ಸಿನಿಮಾ ನೋಡುವುದನ್ನು ಬಿಟ್ಟರು. ಕಾಫಿ ಕುಡಿಯುವುದಿಲ್ಲ, ಟೀನೂ ಇಲ್ಲ.

ಕಿಟ್ಟಿ ಇಂಟರ್‌ಮೀಡಿಯಟ್ ಪರೀಕ್ಷೆಯಲ್ಲಿ ರ್‍ಯಾಂಕ್ ಪಡೆದಾಗ ನಮ್ಮೆಲ್ಲರಿಗೂ ಆದ ಸಂತೋಷ ಅಷ್ಟಿಷ್ಟಲ್ಲ! ಬಿ.ಎಸ್ಸಿ., ಎಮ್ಮೆಸ್ಸಿ., ಮಾಡಿ ಕಾಲೇಜು, ನಿಮ್ಹಾನ್ಸ್, ಎಲ್.ಆರ್.ಡಿ.ಇ. ಡಿಫೆನ್ಸ್ ಕಾಲೇಜುಗಳಲ್ಲಿ ಉದ್ಯೋಗಗಳು. ನಮ್ಮ ಅಮ್ಮ ಆಶೆಪಡುತ್ತಿದ್ದರು ಎಂದು ಹನುಮಂತನಗರದಲ್ಲಿ ಮನೆಯನ್ನು ಕಟ್ಟಿದ. ಆದರೆ ನಮ್ಮ ದುರದೃಷ್ಟ ಅಮ್ಮ ಆ ಮನೆಗೆ ಬಂದಾಗಲೇ ಪಾರ್ಶ್ವವಾಯುವಿಗೆ ತುತ್ತಾದರು. ಆದರೆ ಅವರ ಸ್ವಂತ ಮನೆಯಲ್ಲೇ ಪ್ರಾಣ ಬಿಡಬೇಕೆಂಬ ಆಸೆ ಪೂರೈಸಿತು.

ಕಿಟ್ಟಿ ಸಂಪಾದಿಸಲು ಪ್ರಾರಂಭಿಸಿದ ಮೇಲೆ ಮನೆಯ ಆರ್ಥಿಕಸ್ಥಿತಿ ಬಹಳಷ್ಟು ಸುಧಾರಿಸಿತು. ಅಲ್ಲದೆ ಅವನಿಂದ ಒದಿಗಾಗಿ ಸಹಾಯ ಪಡೆದವರೆಷ್ಟು ಜನರೋ! ಅವನಿಗೆ ಸ್ವಂತ ಬೇಡಿಕೆಗಳು ಅತ್ಯಲ್ಪ. ಸಂಪಾದಿಸಿದ್ದೆಲ್ಲಾ ಪರೋಪಕಾರಕ್ಕೆ.

ನಾಲ್ಕಾರು ಮಂದಿ ಸೇರಿ ಪ್ರಾರಂಭಿಸಿದ್ದ ವಿವೇಕಾನಂದ ವಿದ್ಯಾಶಾಲೆಗಾಗಿ ತನ್ನ ವರಮಾನದ ಬಹಳಷ್ಟು ಭಾಗ ಖರ್ಚುಮಾಡಿದ್ದಾನೆ. ಕಿಟ್ಟಿಯ ಭಜನೆಯ ಕ್ಯಾಸೆಟ್‌ಗಳು ಬಹಳ ಜನಪ್ರಿಯ. ಕೆಲವು ವರ್ಷ ವಿದೇಶಗಳಿಗೆ ಹೋಗಿ ಭಜನೆ ಕಾರ್ಯಕ್ರಮಗಳನ್ನು ಮಾಡಿ, ಕ್ಯಾಸೆಟ್

ವ್ಯಾಪಾರದಲ್ಲಿ ಬಂದ ಹಣವನ್ನೆಲ್ಲಾ ಶಾಲೆಯ ಕಟ್ಟಡಕ್ಕಾಗಿ ವಿನಿಯೋಗಿಸಿದ್ದಾರೆ. ದಿವಂಗತ ನಾರಾಯಣರಾಯರು (ಶಾಲೆಯ ಅಧ್ಯಕ್ಷರಾಗಿದ್ದಾಗ) ಯಾವಾಗಲೂ ಹೇಳುತ್ತಿದ್ದರು "ಈ ಕಟ್ಟಡದ ಒಂದೊಂದು ಕಲ್ಲೂ 'ರಾಮ ರಾಮ' ಎನ್ನುತ್ತದೆ" ಎಂದು.

ನಾವು ಮನೆಕಟ್ಟಿದಾಗ ನಮ್ಮ ಅಂದಾಜಿಗೆ ಮೀರಿ ಹಣ ಖರ್ಚಾಯಿತು. ನಮ್ಮ ಯಜಮಾನರಿಗೆ ಪಿಂಚಣಿಯು ಬರುತ್ತಿರಲಿಲ್ಲ. ಎರಡು ಸೈಟುಗಳಿದ್ದವು. ಅವನ್ನು ಮಾರಿ ಜೀವನ ನಿರ್ವಹಿಸಬೇಕೆನ್ನುವ ಪರಿಸ್ಥಿತಿ ಬಂತು. ಬೇಕೆಂದಾಗ ಮಾರಾಟ ಮಾಡಲಾಗುತ್ತದೆಯೇ? ಬಹಳ ಕಷ್ಟದ ಪರಿಸ್ಥಿತಿ ಇತ್ತು. ನಮ್ಮ ಮನೆಗೆ ಕಿಟ್ಟಿ ಬಂದಿದ್ದಾಗ ಹೀಗಿದೆ ಎಂದು ಹೇಳಿದೆ. ಅಂದಿನಿಂದ ಪ್ರತಿತಿಂಗಳೂ ಮೊದಲ ತಾರೀಖು ನಮಗೆ ಹಣ ಕಳುಹಿಸುತ್ತಿದ್ದ. ಬೇರೆ ಬೇರೆ ಊರುಗಳಲ್ಲಿದ್ದರೂ ಒಮ್ಮೆಯೂ ಹಣ ಕಳುಹಿಸಲು ಮರೆಯಲಿಲ್ಲ. ನಮ್ಮ ಸೈಟು ವ್ಯಾಪಾರವಾಗಿ ಆರ್ಥಿಕಸ್ಥಿತಿ ಸುಧಾರಿಸಿ, 'ಇನ್ನು ಮೇಲೆ ದಯವಿಟ್ಟು ಹಣ ಕಳುಹಿಸಬೇಡ' ಎಂದು ಹೇಳುವವರೆಗೂ ಕಿಟ್ಟಿ ಮತ್ತು ಪಾಪು ಕಳುಹಿಸುತ್ತಿದ್ದ ಹಣದಿಂದ ನಿರ್ವಹಣೆ ಮಾಡುತ್ತಿದ್ದೆವು.

ಕಿಟ್ಟಿಯ ಬಗ್ಗೆ ಹೇಳಬೇಕೆಂದರೆ ಬೇಕಾದಷ್ಟಿದೆ. ಆದರೆ ಎಲ್ಲರೂ ಒಂದೇ ವಿಷಯ ಬರೆದು ಪುನರಾವರ್ತಿ ಆಗಬಾರದೆಂದು ಇಷ್ಟಕ್ಕೆ ನಿಲ್ಲಿಸುತ್ತೇನೆ. ಅವನು ಬರೆದಿರುವ ಪುಸ್ತಕಗಳಂತೂ ಸರಳ ಮತ್ತು ಸುಲಲಿತ. ಯಾರೂ ಓದಿ ಅರ್ಥಮಾಡಿಕೊಳ್ಳಬಹುದು. ಭಜನೆಗಳನ್ನು ಕೇಳುತ್ತಿದ್ದರೆ ಮನಸ್ಸಿಗೆ ಶಾಂತಿ, ಸಮಾಧಾನ. ಬುಧವಾರಗಳು ಇಂಡಿಯನ್ ಇನ್ಸಿಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್‌ನಲ್ಲಿ ಭಜನೆ ತರಗತಿಗಳನ್ನು ನಡೆಸುತ್ತಾನೆ. ಸಮಯ ಸಿಕ್ಕಾಗ ನಾವು ಹೋಗಿ ಭಜನೆ ಕೇಳಿ ಆನಂದಿಸಿ ಬರುತ್ತೇವೆ.

ದೇವರು ಅವನಿಗೆ ಆರೋಗ್ಯ, ದೀರ್ಘಾಯಸ್ಸನ್ನು ನೀಡಿ ಸುಖವಾಗಿಟ್ಟಿರಲಿ.



* * * * *

---




ಒಂದು ತಲೆಯ ಈ ಮನುಷ್ಯನಿಂದ
ಹಿಂಸೆಯದೆಷ್ಟೊಂದು।
ದಶಶಿರ ರಾವಣ ಹಿಂಸೆಯ ಗೈಯೆ
ಅಚ್ಚರಿಯೇನಿಹುದು — ಕಬೀರಾ॥

ಮಲಗಿಹ ಸಾಧುವನೆಬ್ಬಿಸಿರಿ
ಜಪಿಸಲು ತೊಡಗುವನು।
ಎಬ್ಬಿಸದಿರಿ ಈ ಮೂವರನ್ನು
ಸಿಂಹ ಸರ್ಪ ದುಷ್ಟರನು — ಕಬೀರಾ॥

ಬೀಸುಗಲ್ಲು ತಿರುಗುವುದನು ಕಂಡು
ಕಬೀರ ಅಳುತಿಹನು।
ಎರಡು ಕಲ್ಲುಗಳ ಮಧ್ಯದಲ್ಲಿ
ರಕ್ಷಣೆಯಿಹುದೇನು?! — ಕಬೀರಾ॥

**- ಸ್ವಾಮಿ ಪುರುಷೋತ್ತಮಾನಂದ**

# ನನ್ನ ಪ್ರೀತಿಯ ಅಣ್ಣ

✍ ಉಮಾ ಜೋಯಿಸ್

ನನ್ನ ಪ್ರೀತಿಯ ಕಿಟ್ಟಿ ಅಣ್ಣನ ಬಗ್ಗೆ ಬರೆಯಲು ಹೊರಟಿದ್ದೀನಿ. ಅವರು ಮಹಾನುಭಾವರು. ಅವರ ವಿಷಯ ಎಷ್ಟು ಬರೆದರೂ ಸಾಲದು. ಚಿಕ್ಕಂದಿನಿಂದ ಕಿಟ್ಟಿ ಅಣ್ಣ ಎಂದರೆ ತುಂಬಾ ಭಕ್ತಿ. ಎಲ್ಲರೂ ದೇವಸ್ಥಾನಕ್ಕೆ ಹೋಗೋಣ ಅಂದರೆ ನಮ್ಮ ಮನೆಯಲ್ಲೇ ದೇವರು ಇದ್ದಾರೆ ಅನ್ನಿಸುತ್ತಿತ್ತು. ನನ್ನವರು ಮಿಲಿಟರಿಯಲ್ಲಿದ್ದರು. ತಂದೆ, ತಾಯಿ, ಅಣ್ಣಂದಿರು ನನಗೆ ನನ್ನ ಮಕ್ಕಳಿಗೆ ನನ್ನವರು ಮಿಲಿಟರಿಯಿಂದ ಬಂದಮೇಲೆ ಮನೆ ಮಾಡಿದರು. ನಾವು ಬೇರೆ ಮನೆಯಲ್ಲಿದ್ದರೂ ಅಣ್ಣ, ತಮ್ಮಂದಿರನ್ನು ವಾರಕ್ಕೊಮ್ಮೆಯಾದರೂ ನಾನು ನನ್ನಕ್ಕ ನೋಡಿ ಬರುತ್ತೇವೆ.

ಕಿಟ್ಟಿ ಅಣ್ಣನ ಹಾಡೆಂದರೆ, ಅವರ ಭಜನೆಯೆಂದರೆ ಬಹಳ ಇಷ್ಟ. ಅವರ ಕ್ಯಾಸೆಟ್‌ಗಳನ್ನು ಕೇಳುತ್ತಿರುತ್ತೇನೆ. ಎಷ್ಟೋ ಮಕ್ಕಳಿಗೆ ಪರೀಕ್ಷೆಗೆ ಹಣಕೊಟ್ಟಿದ್ದು ಆ ಮಕ್ಕಳಿಂದಲೇ ಎಂದಾದರೂ ತಿಳಿಯುತ್ತಿತ್ತು. ಈಗ ಅದೇ ಕೆಲಸ ಸ್ಕೂಲಿಗಾಗಿ.

ನನ್ನ ಮಕ್ಕಳಿಗೆ ಮೊದಲನೇ ತಾರೀಖು ಪಾಕೆಟ್‌ಮನಿ ಕೊಡುತ್ತಿದ್ದರು. ಪ್ರತಿ ಶನಿವಾರ ಸಿಹಿತಿಂಡಿ ತರುತ್ತಿದ್ದರು. ಅಮೇರಿಕಾಗೆ ಹೋಗಿ ಬಂದಾಗ ಮಕ್ಕಳು ಅಲ್ಲಿಂದ ಏನೇನು ತಂದರು ಅಂತ ಕೇಳುತ್ತಿದ್ದರು. ನಾನು "ಅವರು ಎಷ್ಟು ಒಳ್ಳೆಯ ಕೆಲಸ ಮಾಡ್ತಾರೆ, ಬಡಮಕ್ಕಳ ಶಾಲೆಗೆ ಕೊಡುತ್ತಾರೆ, ನಮಗೆ ಮಾಡಲಾಗದ ಕೆಲಸ ಅವರು ಮಾಡುತ್ತಾರೆ. ಅದೆಷ್ಟು ಹೆಮ್ಮೆಯ ವಿಷಯ" ಎನ್ನುತ್ತಿದ್ದೆ. ಅವರು ಬರೆದ ಗಾಂಧೀ ಪುಸ್ತಕ, ವಿವೇಕಾನಂದರ ಪುಸ್ತಕ ತುಂಬಾ ಚೆನ್ನಾಗಿದೆ. ಎಷ್ಟು ಓದಿದರೂ ಸಾಲದೆನಿಸುತ್ತದೆ. ಅಣ್ಣನ ಭಜನೆ ಎಲ್ಲಿದ್ದರೂ ನಾನು ನನ್ನಕ್ಕ ಹೋಗಿ ಕೇಳುತ್ತೇವೆ.

ನಮ್ಮ ತಾಯಿಯವರನ್ನು ಕಿಟ್ಟಿ ಅಣ್ಣ ಬಹಳ ಚೆನ್ನಾಗಿ ನೋಡಿಕೊಂಡರು. ಅವರು ಆಶ್ರಮಕ್ಕೆ ಹೋಗುವಾಗ ಅವರ ಭಜನೆ ಕ್ಯಾಸೆಟ್ಟನ್ನು ಅಮ್ಮನಿಗಾಗಿ ಹಾಕಿ ಹೋಗುತ್ತಿದ್ದರು.



* * * * *

## ಭಕ್ತಿ-ಪ್ರೇಮ

ಭಕ್ತಿಗು ವೇಷಕು ಅಂತರ ಬಹಳ
ಭೂಮ್ಯಾಕಾಶಗಳಂತೆ।
ಭಕ್ತನು ಗುರುವಿನ ಚರಣದಿ ಲೀನ
ವೇಷಕೆ ಜನಸನ್ಮಾನ — ಕಬೀರಾ॥

ಪ್ರೇಮಭಾವವೊಂದಿರಬೇಕು
ವೇಷವೆಂತಾದರು ಸರಿಯೆ।
ಮನೆಯೊಳಗಾದರು ಇರಬಹುದಯ್ಯ
ವನದೊಳಗಾದರು ಸರಿಯೆ — ಕಬೀರಾ॥

- ಸ್ವಾಮಿ ಪುರುಷೋತ್ತಮಾನಂದ

# ಕರ್ನಾಟಕ ಸಂಗೀತದಿಂದ ಹಿಂದೂಸ್ತಾನಿ ಸಂಗೀತಕ್ಕೆ ಪರಿವರ್ತನೆ

**✍ ಈಶ್ವರ್ ಜೋಯಿಸ್**

**ನಾನು** ಮೊದಲಿನಿಂದಲೂ, ಕರ್ನಾಟಕ ಸಂಗೀತವನ್ನು ಕೇಳುವ ಹವ್ಯಾಸವನ್ನು ಹೊಂದಿದ್ದೆ. ಒಂದುಸಾರಿ ಕಿಟ್ಟಿ ಮಾಸ್ಟರ್ ಬಾತ್‌ರೂಂನಲ್ಲಿ **'ಶಿರಪೇಧರ ಗಂಗಾ'** ಎನ್ನುವ ಹಾಡನ್ನು ಹಿಂದೂಸ್ತಾನಿ ಸಂಗೀತದಲ್ಲಿ ಹಾಡುತ್ತಿದ್ದರು. ಅದೇ ಸಮಯಕ್ಕೆ ಪಾಪು ಅವರು ಅವರ ಜೊತೆಗೆ ಧ್ವನಿಗೂಡಿಸಿದರು. ಅವರಿಬ್ಬರ ಮೇರುಸ್ವರ ಆಲಿಸಿ ತುಂಬಾ ಸಂತೋಷವಾಯಿತು. ಇದೇ ಸಮಯಕ್ಕೆ ಶಿವಸ್ವಾಮಿಯವರು 'ತೀರ್ಥವಿಠಲ, ಕ್ಷೇತ್ರ ವಿಠಲ' ಹಾಡನ್ನು ಪ್ರಾರಂಭಿಸಿದರು. ಆ ಹಾಡನ್ನು ಕಿಟ್ಟಿಯವರು, ಪಾಪುರವರು ಧ್ವನಿಗೂಡಿಸಿ ತಾರಸ್ವರದಲ್ಲಿ ಹಾಡಿದರು. ಹಾಡು ಮುಗಿದಾಗ ನನ್ನ ಮನಸ್ಸಿನಲ್ಲಿ ನಾನೂ ಸಹ ಹಾಡಬೇಕೆಂದು ಆಸೆಯಾಯಿತು.

**ರಾಮಕೃಷ್ಣ ಆಶ್ರಮಕ್ಕೆ ನನ್ನ ಪ್ರವೇಶ 1962ರಲ್ಲಿ**

ಕಿಟ್ಟಿಯವರು ರಾಮಕೃಷ್ಣ ಆಶ್ರಮದಲ್ಲಿ ಹಾಡುತ್ತಾರೆಂದು ನನ್ನ ಪತ್ನಿ ಉಮಾ ಹೇಳಿದಳು. ಅವರ ಹಾಡನ್ನು ಕೇಳಬೇಕೆಂಬ ಆಸೆಯಿಂದ ನಾನು ಆಶ್ರಮಕ್ಕೆ ಹೋದೆ. ಅಲ್ಲಿನ ನಿಶ್ಶಬ್ದ ವಾತಾವರಣವನ್ನು ನೋಡಿ ಮನಸ್ಸಿಗೆ ತುಂಬಾ ಸಂತೋಷವಾಯಿತು. ಕಾರ್ಯಕ್ರಮ ಮುಗಿದ ನಂತರ ಎಲ್ಲರೂ ಸ್ವಾಮಿಗಳಿಗೆ ನಮಸ್ಕಾರ ಮಾಡುವುದನ್ನು ನೋಡಿ ತುಂಬಾ ಆನಂದವಾಯಿತು. ನಂತರ ರಾಮಕೃಷ್ಣ ಆಶ್ರಮಕ್ಕೆ ಹೋಗುವ ಅಭ್ಯಾಸ ಪ್ರಾರಂಭವಾಯಿತು.

**ಕಿಟ್ಟಿಯವರೇ ದೇವರೆಂದು ಭಾವಿಸಿ ಪೂಜಿಸಿದ ಬಗೆ**

ಒಮ್ಮೆ ಒಬ್ಬ ವ್ಯಕ್ತಿಯು ಫಲಪುಷ್ಪಗಳ ಸಹಿತ ಕಿಟ್ಟಿಯವರ ಮನೆಗೆ ಬಂದರು. ಅದನ್ನು ನೋಡಿ ನನಗೆ ದೇವಸ್ಥಾನಕ್ಕೆ ಹೋಗುವ ಬದಲು ಇವರು ಇಲ್ಲಿ ಯಾಕೆ ಬಂದಿರಬಹುದು ಅನಿಸಿತು. ಆ ವ್ಯಕ್ತಿಯು ಕಿಟ್ಟಿಯವರನ್ನು ಕಾಣಬೇಕೆಂದು ಬಯಸಿದರು. ಕಿಟ್ಟಿಯವರು ಆಸನದಲ್ಲಿ ಕುಳಿತಬಳಿಕ ಆ ವ್ಯಕ್ತಿಯು ದೇವರೆಂಬ ಭಾವನೆಯಿಂದ ಧೂಪದೀಪಗಳಿಂದ ಅವರನ್ನು ಆರಾಧಿಸಿ ನೈವೇದ್ಯವನ್ನು ಸಮರ್ಪಿಸಿ, ನಮಸ್ಕರಿಸಿ ಮೌನದಿಂದ ಹಿಂದಿರುಗಿದರು.

**ಹಳ್ಳಿಯ ಜನರ ಮನವನ್ನು ಭಜನೆಯಿಂದ ಸೂರೆಗೊಂಡ ಮಹಾನುಭಾವ**

ಒಮ್ಮೆ ಗಾಂಧೀ ಸ್ಮಾರಕ ನಿಧಿ ಟ್ರಸ್ಟ್ ಮೀಟಿಂಗ್‌ಅನ್ನು ನಂಜನಗೂಡಿನಲ್ಲಿ ಏರ್ಪಡಿಸಿದ್ದರು. ಆ ಸಂದರ್ಭದಲ್ಲಿ ಕಿಟ್ಟಿಯವರನ್ನು ಸಂಧಿಸಿ ಮೀಟಿಂಗಿನ ನಂತರ ಎಲ್ಲರನ್ನೂ ನಮ್ಮ ಹಳ್ಳಿಯಾದ ಹೆಡತಲೆಗೆ ಕರೆದುಕೊಂಡು ಬರುವಂತೆ ವಿನಂತಿಸಿದೆ. ಅವರು ಡಾ. ಶ್ರೀನಿವಾಸಯ್ಯನವರು, ಕಸ್ತೂರಿಯವರು, ಮೋಹನರವರು, ರಾಂಪ್ರಸಾದರವರು ಮುಂತಾದವರನ್ನು ಕರೆದುಕೊಂಡು ನಮ್ಮ ಹಳ್ಳಿಗೆ ಬಂದರು. ಆಗ ಅಲ್ಲಿಯ ಲಕ್ಷ್ಮೀಕಾಂತ ದೇವಸ್ಥಾನದ ಮುಂಭಾಗದಲ್ಲಿರುವ ಹದಿನಾರು ಮುಖದ ಚಾವಡಿಯಲ್ಲಿ ಭಜನೆ ಕಾರ್ಯಕ್ರಮವನ್ನು ಏರ್ಪಡಿಸಿದ್ದೆ. ಭಜನೆಯಲ್ಲಿ ಕಿಟ್ಟಿಯವರು ಪ್ರತಿ ಹಾಡಿನ ಅರ್ಥವನ್ನು ಹಳ್ಳಿಗರೆಲ್ಲರ ಮನಮುಟ್ಟುವಂತೆ ವಿವರಿಸಿ, ಅನಂತರ ಸುಶ್ರಾವ್ಯವಾಗಿ ಹಾಡಿ ಜನರ ಮನವನ್ನು ಗೆದ್ದರು. ಇದೇ ರೀತಿ ಹಾಡುವವರೆಲ್ಲರೂ ಮೊದಲು ಅರ್ಥವನ್ನು ಹೇಳಿ ಅನಂತರ ಹಾಡಿದರೆ ಕೇಳುವವರ ಮನಸ್ಸಿಗೆ ತುಂಬಾ ಹಿತಕರವಾಗಿ ಮರೆಯಲಾಗದ ನೆನಪಿನಲ್ಲುಳಿಯುತ್ತದೆ. ಈಗಲೂ ನಾನು ಹಳ್ಳಿಗೆ ಹೋದಾಗ ನನ್ನನ್ನು ಕಂಡೊಡನೆ ಹಳ್ಳಿಯವರು "ಬುದ್ಧಿ ಭಜನೆ ಮಾಡುದ್ರಲ್ಲಾ ಅವರ್ನಾ ಇನ್ನೋನ್ಸಾರಿ ಕರ್ಕಂಡ್ ಬನ್ನಿ, ತುಂಬಾ ಚೆಂದಾಗ ಹಾಡುದ್ರು, ಕೇಳ್ಬೇಕು ಅನ್ನಿಸ್ತದಾ' ಎಂದು ಹೇಳುತ್ತಾರೆ.



* * * * *

# ಅಣ್ಣ ಕಿಟ್ಟಿ – ಜ್ಞಾನಿ-ದಾನಿ

✍ ಎಸ್. ಎನ್. ಗಣೇಶ್

ಇವರ ಆಗಮನದಿಂದ, ಬೆಳಕು ಬೆಳಗಿದಂತಾಗುತ್ತದೆ. ಇಂತಹ ಕೆಲವೇ ಕೆಲವರ ಗುಂಪಿಗೆ ಸೇರಿದವರು ನಮ್ಮ ಕಿಟ್ಟಿ. ಕಿಟ್ಟಿ, ನಮಗೆ ಬಾಲಕ ಸಂಘ ಹಾಗೂ ಸ್ಕೂಲಿನಲ್ಲಿ ಕಿಟ್ಟಿ ಮೇಷ್ಟು. ಕಾಲೇಜಿನಲ್ಲಿ ಉಪಾಧ್ಯಾಯರಾಗಿದ್ದಾಗ N.K. M.E.S.ನಲ್ಲಿ Professor ಸಾಬ್, ಇತರ ಸ್ನೇಹಿತರಿಗೆ ಕೃಷ್ಣಸ್ವಾಮಿ ಹಾಗೂ ಕೆಲವರಿಗೆ ಕಿಟ್ಟಿ ಮಾಮ, ಹೀಗೆ ದೇವನೊಬ್ಬ ನಾಮ ಹಲವು ಎಂದಂತೆ. ಜ್ಞಾನಿ ಎಂದು ಕರೆದೆನೇಕೆಂದರೆ ಇವರಿಗೆ ತಿಳಿಯದ ವಿಷಯವೇ ಇಲ್ಲ. ವಿಜ್ಞಾನದಿಂದ ಮೊದಲಾಗಿ, Politicsವರೆಗೂ ಏನೇನು ವಿಷಯಗಳಿವೆಯೋ, ಇವರಿಗೆ ಎಲ್ಲಾ ತಿಳಿದಿದೆ. ನಾವೇನಾದರೂ ಹೊಸ ಸಮಾಚಾರವೆಂದು ಅವರಿಗೆ ಹೇಳಿದರೆ; ಹೌದು ನಾನೂ ಓದಿದೆ ಎಂದು ಅಷ್ಟು ಮಾತ್ರ ಹೇಳುತ್ತಾರೆ. Prefessor ಆಗಿದ್ದರಲ್ಲವೇ, ಅದಕ್ಕೆ ಅವರು ಎಲ್ಲವನ್ನು ತಿಳಿದವರಾಗಿರಲೇಬೇಕು. ಇವರು S.S.L.C. ಯಿಂದ ಹಿಡಿದು ಪದವಿ ಪಡೆಯುವ ತನಕ ಎಲ್ಲದರಲ್ಲೂ 'distinction'ನಲ್ಲೆ ಪಾಸ್ ಮಾಡಿದವರು. ಇದು ಅನೇಕರಿಗೆ ತಿಳಿಯದು. ಹೇಗೆ ತಿಳಿಯಬೇಕು? ಯಾರು ಹೇಳುವವರು? ಅವರು ಬರೆದಿರುವ ಪುಸ್ತಕಗಳಾದ 'ಮಹಾತ್ಮಾಗಾಂಧಿ', 'ವಿನೋಬಭಾವೆ', 'ಐನ್‌ಸ್ಟೈನ್', 'ರಿಚರ್ಡ್‌ಫೈನ್ ಮೆನ್' ಮೊದಲಾದವುಗಳ proof read ಮಾಡುವ ಅನುಭವದಿಂದ ಅವರ ಜ್ಞಾನ ಎಂತಹುದು ಎಂದು ನನಗೆ ತಿಳಿದಿದೆ. ಕಿಟ್ಟಿ ರಚಿಸಿರುವ 'ವಿವೇಕಾನಂದರ ಭಜಿಸೋಣ' ಹಾಗೂ 'ಜಯರಾಮ್ ಬಾಟಿಗೆ' ಅತ್ಯಂತ ಜನಪ್ರಿಯವಾಗಿದೆ.

ಇಲ್ಲಿ ಒಂದು break ತೆಗೆದುಕೊಂಡು ಅವರ 80ನೇ ವರ್ಷದ ಈ ಮಹತ್ತರ ದಿನದಲ್ಲಿ ಅವರಿಗೆ ಶುಭಕೋರಿ, ಅವರ ಆರೋಗ್ಯಕ್ಕೆ ದೇವರಲ್ಲಿ, ಪ್ರಾರ್ಥಿಸೋಣ.

ಕಿಟ್ಟಿ ಎಂದರೆ ಹಾಡು. ಇದು ಅವರ ಜೀವನದ ಒಂದು ಪ್ರಮುಖ ಭಾಗವಾಗಿಯೇ ಇದೆ. ಇದು ರಾಮಕೃಷ್ಣ ಆಶ್ರಮದ ಭಜನೆಗೆ ಸಂಬಂಧಪಟ್ಟಿದ್ದು. ಇದರಲ್ಲಿ ಭಕ್ತಿ ಭಾವ ಹೆಚ್ಚು. ಹಾಡುವಾಗ ಅವರು ಭಕ್ತಿಪರವಶರಾಗಿ ನಮ್ಮನ್ನೂ ಆ ಲೋಕಕ್ಕೆ ಕರೆದುಕೊಂಡು ಹೋಗುವ ದೈವಿಕ ಶಕ್ತಿ ಅವರಲ್ಲಿದೆ. ಅನೇಕ ಹಾಡುಗಳಿಗೆ ಅರ್ಥಹೇಳಿ, ನಂತರ ಹಾಡುವುದು ಇವರ ವಾಡಿಕೆ. ಉದಾಹರಣೆಗೆ 'ಗಗನ ಮಯತಾಲ ರವಿಚಂದ್ರ ದೀಪಕ ಬನೇ, ತಾರಕಾ ಮಂಡಲ ಚಮಕೇ ಮೋತಿರೇ' ಇದರ ಅರ್ಥಹೇಳಿ ನಂತರ ಈ ಹಾಡನ್ನು ಸುಶ್ರಾವ್ಯವಾಗಿ ಕೇಳಿಸುವುದು ಕರ್ಣಾನಂದ ಮಾತ್ರವಲ್ಲದೆ ನಾವು ಬೇರೆ ಲೋಕದ ಅನುಭವವನ್ನೇ ಪಡೆಯುತ್ತೇವೆ. ಇದನ್ನು ನಾನು ಅನುಭವಿಸಿದ್ದೇನೆ. ಅನೇಕ ಜಾಗಗಳಲ್ಲಿ ನಾನು ತಬಲ ಸಾತ್ ನೀಡುವ ಒಂದು ಸುಯೋಗದಿಂದ ಇದು ಸಾಧ್ಯವಾಗಿದೆ ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಕಿಟ್ಟಿಯ ಜೊತೆ ನನ್ನ ಇನ್ನೊಬ್ಬ ಸಹೋದರ ಪಾಪುವೂ ಕೂಡಿ ಹಾಡಿದರೆ ಅದರ ಆನಂದವೇ ಬೇರೆ. ಇವರಿಬ್ಬರೂ ಸೇರಿ ಕಲಿತದೆಷ್ಟೋ ನನಗೆ ಗೊತ್ತಿಲ್ಲ. ಆದರೆ ಅವರು ಕೂಡಿ ಭಜನೇ ಮಾಡುವುದು ಅತ್ಯಂತ ಆನಂದ ಕೊಟ್ಟಿದೆ, ಕೊಡುತ್ತಲಿದೆ.

**ನನ್ನ ತಬಲದ ಬಗ್ಗೆ ಒಂದೆರಡು ಮಾತು:**

ನಾನು ತಬಲ ನುಡಿಸಲು ಕಲಿತವನಲ್ಲ, ABCD ಅಷ್ಟು ತಬಲ ಸ್ವಾಮಿ ಋತಾತ್ಮನಂದರ ಪುಸ್ತಕದಿಂದ ಕಾಪಿ ಮಾಡಿಕೊಂಡು ಕಲಿತದ್ದು. ನಾನು ತಬಲ ನುಡಿಸಿದುದೇ ಒಂದು ಆಕಸ್ಮಿಕ, ಗುರುಮಹಾರಾಜರ ಆದೇಶ ಎಂದೆನ್ನ ಬೇಕು. ನಾವುಗಳು ಕಿಟ್ಟಿಯ ಜೊತೆಗೆ 1948ರ ಸುಮಾರಿಗೆ ಮಲ್ಲೇಶ್ವರ ಬಿಟ್ಟು ಗವಿಪುರಕ್ಕೆ ಬಂದು ಸೇರಿಕೊಂಡೆವು. ರಾಮಕೃಷ್ಣ ಆಶ್ರಮದ ಸಂಜೆಯ ಆರಾತ್ರಿಕದಲ್ಲಿ ಕಿಟ್ಟಿಯ ಜೊತೆ ಹಾಡಲು ಸೇರುತ್ತಿದ್ದೆ. ನನಗೆ ಆಗ ಎಂಟು ವರ್ಷ. ತಾಳ ಕೈಗೆ ಸಿಗುತ್ತಿದ್ದರಿಂದ ತಾಳದ ವಿದ್ವಾನ್ ಆದೆ. ಒಂದು ದಿನ ತಬಲ ನುಡಿಸಲು ಯಾರೂ ಇರಲಿಲ್ಲ. ಅದನ್ನು

ಬಾರಿಸಲು ಜಾಸ್ತಿ ಗಲಾಟೆ ಆಗದಂತೆ ನೋಡಿಕೊಂಡು ನುಡಿಸಲು ಶುರು ಮಾಡಿದೆ. ಆದರೆ ಶುರುವಿನಲ್ಲಿ ಇದರ chance ದಿನವೂ ಸಿಗುತ್ತಿರಲಿಲ್ಲ. ತಬಲದವನು ಬರದಿದ್ದ ದಿನ ಮಾತ್ರ ಅಂದರೆ, ತಬಲ ನೋಡಿ, ಕೇಳಿ, ಕಲಿತದ್ದೇ ಹೆಚ್ಚು. ಸ್ವಾಮಿ ಋತಾತ್ಮನಂದರಿಗೆ ನೀವೇ ನನ್ನ ತಬಲಾದ ಗುರುಗಳೆಂದರೆ ಅವರು ಒಪ್ಪಿದ್ದರೇ ಕೇಳಿ. "ಹೋಗೋ ಅದೇನು ಬಾರಿಸುತ್ತಿಯೋ ನನಗಂತೂ ತಿಳಿಯೊಲ್ಲ" ಎಂದು ಒಂದೇ ಏಟಿಗೆ ತೆಗೆದುಹಾಕಿದರು. ನನಗೆ ಕಿಟ್ಟಿ ಹೇಳುವ ಎಲ್ಲಾ ಹಾಡುಗಳು ತಿಳಿದಿರುವುದರಿಂದ ಅದನ್ನೇ follow ಮಾಡುವುದೇ ನನ್ನ ಗುಟ್ಟು. ಇದರಿಂದ ಯಾರಿಗೂ ಬೇಜಾರಾದಂತೆ ನನ್ನ ಅನುಭವಕ್ಕೆ ಬಂದಿಲ್ಲ. ಈ ನನ್ನ ತಬಲದ ಪ್ರಯಾಣ ಬಹಳ ದೊಡ್ಡದು. ಆಶ್ರಮದಲ್ಲಿ ತಬಲ ನುಡಿಸುವುದು ಮೊದಲಾದರೆ ಕಾಲೇಜ್ orchestraದಲ್ಲಿ—ಹಾಳೂರಿಗೆ ಉಳಿದವನೇ ಗೌಡ!

1989ನೇ ವರ್ಷದಲ್ಲಿ ಅಮೇರಿಕಾ ಪ್ರವಾಸ ಬರೀ ತಬಲದ ಪ್ರಭಾವದಿಂದ ನಡೆದದ್ದು. ಇದಕ್ಕೆ ಕಿಟ್ಟಿಯ ಆಶೀರ್ವಾದ ಇದ್ದೆ ಇತ್ತು ಎಂದು ಪ್ರತ್ಯೇಕವಾಗಿ ಹೇಳ ಬೇಕಾದ್ದಿಲ್ಲ. ಕಿಟ್ಟಿ ಭಜನೆ, ನಾನು ತಬಲ, ರಾಮಪ್ರಸಾದ್ ತಾಳ. ಈ ಪ್ರವಾಸ ಅತ್ಯಂತ ಆನಂದವನ್ನು ಉಂಟು ಮಾಡಿದೆ. ಆನಂದದೊಂದಿಗೆ ಹೋದಲ್ಲೆಲ್ಲಾ ಬಹು ಮರ್ಯಾದೆಯ ಸ್ವಾಗತ, ಹಾಗೂ ಅನೇಕಾನೇಕ ಜನಗಳ ಪರಿಚಯವಾಯಿತು. ಪ್ರವಾಸದ ಕಡೆಯ ಹಂತದಲ್ಲಿ Vedanta Socioty of Northern California, Sanfransiscoದಲ್ಲಿ ನಡೆದ ಕಾರ್ಯಕ್ರಮ ಅತ್ಯಂತ ಉನ್ನತ ಮಟ್ಟದ್ದಾಗಿದ್ದು, ಸ್ವಾಮಿ ಪ್ರಬುದ್ಧಾನಂದರು ಮೆಚ್ಚಿ ಶಹಭಾಸ್‌ಗಿರಿಯನ್ನು ಕೊಟ್ಟರು. ಇದು ಅವರ ಆಶೀರ್ವಾದವೆಂದು ಸ್ವೀಕರಿಸಿದೆ.

ಬುಧವಾರದ ಹಾಡಿನ Classಗಳು World Culture ನಲ್ಲಿ ನಡೆಯುತ್ತಿವೆ. ಇದರಲ್ಲಿ ಕಿಟ್ಟಿ ಇಂದಿಗೂ ಒಂದು ಹೊಸ ಹಾಡು ಅವರಿಗೆ ಹಿಡಿಸಿದರೆ, ಅದನ್ನು ಕಲಿತು, ನಮಗೆ ಕಲಿಸಿ, ಆನಂದಪಡುತ್ತಾರೆ. ಇದು ನಡೆದೇ ಇದೆ.

**ಬಾಲಕ ಸಂಘ:**

ಬಾಲಕ ಸಂಘ ಶುರುವಾಗುವ ಮೊದಲಿನಿಂದಲೂ ನಾನು ಆಶ್ರಮಕ್ಕೆ ತಪ್ಪದೆ ಸಂಜೆಯ ಆರಾತ್ರಿಕದಲ್ಲಿ ಭಾಗಿ ಯಾಗಿರುತ್ತಿದ್ದೆ. ಸ್ವಾಮಿ ಯತೀಶ್ವರಾನಂದರ ಪ್ರೇರಣೆ ಯಿಂದ Sunday School ಶುರುವಾದದ್ದು 1953ರ ಸುಮಾರಿಗೆ. ಅದರ ಮೇಷ್ಟ್ರುಗಳು ಸತ್ಯನಾರಾಯಣ ಮಹಾರಾಜ್ (Swami Shastranada), ಕಿಟ್ಟಿ ಮೇಷ್ಟ್ರು ಹಾಗೂ ನಾರಾಯಣ ಮೂರ್ತಿಗಳು. ಇವರೆಲ್ಲಾ ಪ್ರಾತಃಸ್ಮರಣೀಯರು, ಮರೆಯುವುದುಂಟೇ?! ಈ Sunday School ಶುರುವಾದ ದಿನ ನಾವು ಎಂಟೇ ಜನ ಹುಡುಗರು. ಇದು ಬೆಳೆದು ನಂತರ Daily Section ಮೊದಲಾಯಿತು. ಇದರಲ್ಲಿ ಸುಂದರಕೃಷ್ಣ ಮಹಾರಾಜ್ (Swami Harshananda) ಸಹ ಪಾಠ ಹೇಳುತ್ತಿದ್ದರು. ಆ ದಿನಗಳು ಮರೆಯಲಾದೀತೇ! ನಾವು ಕಲಿತದ್ದು ಅಪಾರ ಶ್ಲೋಕಗಳು, ಶಾಂತಿ ಪಾಠಗಳು, ವೇದ ಪಾಠಗಳು, ಭಜನೆ ಹಾಡುಗಳು, ನೀತಿ ಕಥೆಗಳು, ವಿಧವಿಧವಾದ ಆಟಗಳು, ಸಾಧುಗಳ ಸಂಘ ಇದೆಲ್ಲಾ ಆ ವಯಸ್ಸಿನಲ್ಲಿ ಯಾರಿಗೆ ಸಿಗಬೇಕು. ಇದು ಬಾಲಕ ಸಂಘದ ಒಂದು ಪಕ್ಷಿನೋಟ ಮಾತ್ರ.

**ಕಿಟ್ಟಿ — ಮಹಾದಾನಿ:**

ಕಿಟ್ಟಿ ಅನೇಕ ಜನರಿಗೆ ಸಹಾಯ ಮಾಡಿದ್ದಾರೆ; ಇದು ವಿದ್ಯಾದಾನವಾಗಿರಬಹುದು, ಧನಸಹಾಯವಾಗಿರ ಬಹುದು. ಸಲಹೆ-ಸೌಲಭ್ಯಗಳಾಗಿರಬಹುದು. ನನ್ನಮಟ್ಟಿಗೆ ಹೇಳುವುದಾದರೆ ನಾನು ಅವರ ನೆರಳಿನಲ್ಲಿಯೇ ಬೆಳೆದವನು, ಇರುವವನು. ಮೂರು ಉದಾಹರಣೆಗಳನ್ನು ಕೊಡಲು ಇಚ್ಛಿಸುತ್ತೇನೆ. 1) ನನ್ನದು B.Sc., fail ಆಯಿತು — 1960. ಅವರಲ್ಲಿ ಹೋಗಿ ನನಗೆ 350ರೂ. ಬೇಕೆಂದು ಕೇಳಿದೆ. ಅವರು ಯಾಕೆ ಎಂದು ಕೇಳಲಿಲ್ಲ. AMIE ಸೇರುತ್ತೇನೆ ಎಂದು ನಾನೇ ಹೇಳಿದೆ. ಇದು ಕಷ್ಟದ Course. ನಾನು Pass ಮಾಡುವ ಭರವಸೆ ನನಗೇ ಇಲ್ಲ. ಇದು ನನಗೂ ಗೊತ್ತು, ಅವರಿಗೂ ಗೊತ್ತು. ಆದರೆ ಅದು ಯಾವುದನ್ನೂ ತೋರಿಸದೆ, ಅಲ್ಲಿ, ಇಲ್ಲಿ ಇಟ್ಟಿದ್ದ ಹಣವನ್ನು ಸೇರಿಸಿಕೊಟ್ಟರು.

ಆಗ ಅವರಿಗೆ 400 ರೂ. ಸಂಬಳ ಎಂದು ತೋರುತ್ತದೆ. ಸಂಸಾರದ ಭಾರ ಹೆಚ್ಚಾಗಿ ಅವರ ಮೇಲೆಯೇ ಇತ್ತು. AMIE ಬೆಂಗಳೂರಿನ resultನಲ್ಲಿ ಶೇ. 0.8 ಪಾಸಾದದ್ದು. ನಾನು ಶೇ. 99.2 ರಲ್ಲಿ ಇದ್ದೆ! 2) ನಾನು Engineering final yearಗೆ ಬಂದಾಗ 1000 ರೂ. ಇದ್ದರೆ ಬೇಕೆಂದು ಕೇಳಿದೆ. ಕಿಟ್ಟಿಗೆ ಯಾಕೆ, ಏನು ಎಂದು ಕೇಳುವ ಅಭ್ಯಾಸವೇ ಇರಲಿಲ್ಲ. ನಾನೇ ಒಂದು Bike ಕೊಳ್ಳುತ್ತೇನೆ ಅದಕ್ಕೆ 1500 ರೂ. ನನ್ನ ಬಳಿ 300 ರೂ. ಇದೆ. ಇನ್ನೂ 200 ರೂ. adjust ಮಾಡುತ್ತೇನೆ ಎಂದು ಹೇಳಿದೆ. ಅದಕ್ಕೆ 1500 ರೂ. ನಾನೇ ಕೊಡುತ್ತೇನೆ ಎಂದು ಹೇಳಿ, ಅವರದೇ ಧಾಟಿಯಲ್ಲಿ – "ಅದು ಓಡುತ್ತೊ", ಎಂದು ಮಾತ್ರ ಕೇಳಿದರು, ನನ್ನ ಕಡೆಯ ವರ್ಷ ಸುಗಮವಾಗಿ ಕಳೆಯಿತು. ಏಕೆಂದರೆ ನನ್ನ ಕಾಲೇಜ್ 14 ಕಿ.ಮೀ. ದೂರದಲ್ಲಿತ್ತು. ಓಡಾಡುವುದು ಸುಲಭವಾಯಿತು. 3) ನಾನು ಕೆಲಸದಲ್ಲಿದ್ದಾಗಲೂ ನನ್ನ car ಕೊಂಡದ್ದು. ಅವರ ಬೋಣಿಯ 5000 ರೂ.ನಿಂದಲೇ!

ಅವರಿಗೆ ನನ್ನ ಅನಂತಾನಂತ ವಂದನೆಗಳು.



* * * * *

# ಪವಿತ್ರ ದೃಷ್ಟಿ

೧೯೬೧; ಬೆಂಗಳೂರು ರಾಮಕೃಷ್ಣ ಆಶ್ರಮ. ನಾನು ಅಲ್ಲಿ ಬ್ರಹ್ಮಚಾರಿಯಾಗಿ ಸೇರಿ ಒಂದು ವರ್ಷ ದಾಟಿತ್ತು. ಅಲ್ಲಿನ ಅಧ್ಯಕ್ಷರು ಪರಮಪೂಜ್ಯ ಸ್ವಾಮಿ ಯತೀಶ್ವರಾನಂದಜೀ ಮಹಾರಾಜರು. ನನ್ನ ಗುರುಗಳು. ಇದಿಷ್ಟು ಹಿನ್ನೆಲೆ ಸಾಕು.

ಒಂದಾನೊಂದು ಮಧ್ಯಾಹ್ನ ಸುಮಾರು ಒಂದೂವರೆ ಘಂಟೆಯಿರಬಹುದು. ನಮ್ಮೆಲ್ಲರ ಊಟ ಮುಗಿದಿತ್ತೆಂದು ಹೇಳಬೇಕಾಗಿಯೇ ಇಲ್ಲ. ಆ ಹೊತ್ತಿಗೆ ಇಬ್ಬರು ದಂಪತಿಗಳು ಬಂದರು. ಬಂಗಾಳಿಗಳೆಂದು ನೆನಪು. ಪೂಜ್ಯ ಯತೀಶ್ವರಾನಂದಜಿಯವರ ಶಿಷ್ಯರು. ಆದ್ದರಿಂದ ಅವರಿಗೆ ಸುದ್ದಿ ಮುಟ್ಟಿಸಿದೆ. ಅವರು ಹೊರಬಂದು ಅತಿಥಿಗಳೊಂದಿಗೆ ಮಾತನಾಡಿದಾಗ ತಿಳಿಯಿತು, ಅವರಿಗೆ ಊಟವಾಗಿರಲಿಲ್ಲವೆಂದು. ಸ್ವಾಮೀಜಿಯವರು ನನ್ನನ್ನು ವಿಚಾರಿಸಿದರು – ಅಡಿಗೆಯೇನಾದರೂ ಮಿಕ್ಕಿದೆಯೇ? ಎಂದು. ಹೌದೆಂದೆ. ಏಕೆಂದರೆ ನಾನೇ ಭಂಡಾರಿ – ಎಂದರೆ ಅಡಿಗೆಮನೆಯ ಉಸ್ತುವಾರಿ ನೋಡಿಕೊಳ್ಳುವವನು. ಅತಿಥಿಗಳನ್ನು ಊಟದ ಮನೆಗೆ ಕರೆದೊಯ್ದೆ. ತಟ್ಟೆಯಿಟ್ಟು ಉಣಬಡಿಸಿದೆ. ಪೂಜ್ಯ ಸ್ವಾಮೀಜಿಯವರು ಜೊತೆಗೇ ಬಂದಿದ್ದರು. ಅವರೂ ಅಲ್ಲೇ ನೆಲದ ಮೇಲೆಯೇ ಅತಿಥಿಗಳ ಮುಂದೆ ಕುಳಿತುಕೊಂಡು ಅವರನ್ನು ಉಪಚರಿಸಿದರು. ಅದು ಸೆಖೆಗಾಲವಾಗಿತ್ತು. ಸೆಖೆಯೊಂದಿಗೆ ನೊಣಗಳ ಕಾಟ. ಪೂಜ್ಯ ಸ್ವಾಮೀಜಿಯವರು ನನ್ನಿಂದ ಬೀಸಣಿಗೆ ತರಿಸಿಕೊಂಡು ಬೀಸುತ್ತ ಆ ನೊಣಗಳನ್ನು ಓಡಿಸಲಾರಂಭಿಸಿದರು. ನಡುನಡುವೆ ಆ ದಂಪತಿಗಳಿಗೂ ಗಾಳಿ ಬೀಸಿದರು. ನಾನೆಂದೆ, 'ಸ್ವಾಮೀಜಿ, ಬೀಸಣಿಗೆ ಇಲ್ಲಿಕೊಡಿ, ನಾನು ಬೀಸುತ್ತೇನೆ'. ಆದರೆ ಸ್ವಾಮೀಜಿ ತಾವೇ ಬೀಸುವುದನ್ನು ಮುಂದುವರಿಸಿದರು. ಊಟ ಮುಗಿಯಿತು. ಸ್ವಲ್ಪ ಹೊತ್ತು ಮಾತುಕತೆಯಾದ ಬಳಿಕ ಅತಿಥಿಗಳು ಪೂಜ್ಯರಿಂದ ಆಶೀರ್ವಾದ ಪಡೆದು ಬೀಳ್ಕೊಂಡರು.

ಈ ವೇಳೆಗೆ ನನ್ನ ಮನಸ್ಸನ್ನು ಒಂದು ಪ್ರಶ್ನೆ ಆವರಿಸಿತ್ತು : 'ಇಷ್ಟು ದೊಡ್ಡ ಸ್ವಾಮಿಗಳು, ಸಾಲದ್ದಕ್ಕೆ ಮಂತ್ರದೀಕ್ಷೆ ಕೊಡುವ ಗುರುಗಳು, ಆ ದಂಪತಿಗಳು ಊಟ ಮಾಡುತ್ತಿರುವಾಗ ಅವರ ಮುಂದೆ ಕುಳಿತುಕೊಂಡು ಗಾಳಿ ಬೀಸುವುದೆಂದರೇನು? ನೊಣ ಓಡಿಸುವುದೆಂದರೇನು?' ಎಂಬ ಪ್ರಶ್ನೆ. ದಕ್ಷಿಣ ಭಾರತದ ಸಂಪ್ರದಾಯಸ್ಥ ಪರಂಪರೆಯಲ್ಲಿ ಬೆಳೆದುಬಂದ ನನ್ನ ಮನಸ್ಸಿನಲ್ಲಿ ಈ ಪ್ರಶ್ನೆಯೊಂದಿಗೆ ಇನ್ನೂ ಕೆಲವು ಉಪಪ್ರಶ್ನೆಗಳೂ ಉದಿಸಿದುವು. ಆದರೆ ಬಾಯಿಬಿಟ್ಟು ಕೇಳುವುದಕ್ಕೆ ನನ್ನೊಳಗೆ ಸಾಕಷ್ಟು ಧೈರ್ಯವಿನ್ನೂ ಬೆಳೆದಿರಲಿಲ್ಲ. ಆದರೆ ನಾನು ಕೇಳಬೇಕಾಗಿಯೇ ಬರಲಿಲ್ಲ! ಪೂಜ್ಯ ಸ್ವಾಮೀಜಿಯವರ ಬಾಯಿಂದ ವಾಕ್ಯವೊಂದು ತನ್ನಷ್ಟಕ್ಕೆ ಹೊಮ್ಮಿತ್ತು; 'ಸಾಕ್ಷಾತ್ ಲಕ್ಷ್ಮೀ ನಾರಾಯಣರು!' ಅಷ್ಟೆ. ಅದಕ್ಕಿಂತ ಹೆಚ್ಚು ಒಂದೇ ಒಂದು ಶಬ್ದವೂ ಹೊರಬರಲಿಲ್ಲ. ಸಾಲದೆ? ಇನ್ನು ಹೆಚ್ಚಿನ ಮಾತೇಕೆ ಬೇಕು?

ಪೂಜ್ಯ ಸ್ವಾಮೀಜಿಯವರ ಮುಖಕಮಲದಿಂದ ಈ ವಾಣಿ ಹೊರಹೊಮ್ಮಿ ಇಂದಿಗೆ ನಲ್ವತ್ತು ವರ್ಷಗಳೇ ಸಂದುವು. ಆದರೆ ಅದರ ಪರಿಣಾಮ ಮಾತ್ರ ನನ್ನ ಮನಸ್ಸಿನಲ್ಲಿ ಬೃಹದಾಕಾರವಾಗಿ ಬೆಳೆದಿದೆ, ಬೆಳೆಯುತ್ತಲೇ ಇದೆ! ಆ ದಂಪತಿಗಳು ಕೇವಲ ಗಂಡಹೆಂಡಿರಲ್ಲ! ಸಂಸ್ಕೃತದಲ್ಲಿ ಹೇಳುವಂತೆ ಪತಿ-ಪತ್ನಿಯರೂ ಅಲ್ಲ! ಸಾಕ್ಷಾತ್ ಲಕ್ಷ್ಮೀನಾರಾಯಣರು! ಆರ್ಯಋಷಿಗಳ ದೃಷ್ಟಿಕೋನವೂ ಹೀಗೆಯೇ ಇತ್ತಲ್ಲವೆ?

ಎಂಥ ಪವಿತ್ರ ದೃಷ್ಟಿ!

\- ಸ್ವಾಮಿ ಪುರುಷೋತ್ತಮಾನಂದ

# ನನ್ನ ಮಾವ (ಕಿಟ್ಟಿ ಅಣ್ಣಾ)

✍ ಭ್ರಮರ ಗೋಪೀನಾಥ್

**ಶ್ರೀ** ಎಸ್. ಎನ್. ಕೃಷ್ಣಸ್ವಾಮಿ. ನನಗೆ ಸೋದರ ಮಾವ ಆಗಬೇಕು. ಅವರ ತಂಗಿ ಶ್ರೀಮತಿ ಉಮಾ ಈಶ್ವರ್ ನಾನೂ ಬಹಳ ಜೊತೆಯಾಗಿ, ಸ್ನೇಹದಿಂದ ಪರಸ್ಪರ ಮನೆಗೆ ಹೋಗಿ ಬರುವ ರೂಢಿಯಾದ್ದರಿಂದ ಅವಳು 'ಕಿಟ್ಟಿ ಅಣ್ಣ' ಅಂತಾ ಇದ್ಲು. ನನಗೂ ಹಾಗೆ ರೂಢಿಯಾಯಿತು. ಇಂದಿಗೂ ಕಿಟ್ಟಿ ಅಣ್ಣ ಎಂದೇ ಕರೆಯುವುದು.

ಮೊದಲಿಂದಲೂ ಶ್ರೀರಾಮಕೃಷ್ಣಮಠದ ಸಂಪರ್ಕ, ಅಧ್ಯಾತ್ಮ ಜೀವನದತ್ತ ಒಲವು, ಅವರ ಶಿಸ್ತು, ಹಸನ್ಮುಖ, ನನ್ನನ್ನು ವಿಶ್ವಾಸದಿಂದ ವಿಚಾರಿಸುವ ಪರಿ, ಈ ಗುಣಗಳನ್ನು ನೋಡಿ ಅವರ ವ್ಯಕ್ತಿತ್ವದಲ್ಲಿ ಬಹಳ ಪೂಜ್ಯತೆ ನನಗೆ.

1958ನೇ ಇಸವಿ. ಅವರ ಮನೆಗೆ ಹೋದಾಗ ಅಣ್ಣನ ಕೊಠಡಿಯಲ್ಲಿ ಅಡಿ ಇರಿಸಿದ್ದೆ, ಬೆರಗಾದೆ. ಅಧ್ಯಾತ್ಮದ ಪುಸ್ತಕಗಳು ಬಹಳ ಇದ್ದವು. ನನಗೆ ಓದುವುದರಲ್ಲಿ ಬಹಳ ಆಸಕ್ತಿ. ಇದರ ಉಪಯೋಗ ಪಡೆಯಬೇಕೆಂದು ಸಂಕೋಚದಿಂದ "ಅಣ್ಣಾ... ಈ ಪುಸ್ತಕಗಳನ್ನು ಓದಿ ಕೊಡಲು ಅನುಮತಿ ಕೊಡುತ್ತೀರಾ?" ಎಂದೆ. ಅವರು ಸಂತೋಷದಿಂದ—ಖಂಡಿತ... "ಓದು, ಆದರೆ ನಂತರ ಆ ಪುಸ್ತಕವನ್ನು ಆ ಸ್ಥಳದಲ್ಲೇ ಇರಿಸು. ಯಾವಾಗಲೂ ಓದುವುದಕ್ಕೆ ತೆರದ ಕೊಠಡಿ ನಿನ್ನ ಪಾಲಿಗೆ" ಎಂದರು. ನನಗಾದ ಆನಂದ ಅಪಾರ. ಸುಮಾರು ವರ್ಷಗಳು ಅವರ ಮನೆಗೆ ಹೋಗಿ ಬೇಕಾದ ಪುಸ್ತಕಗಳ ಲಾಭ ಪಡೆದು, ಅದನ್ನೆಲ್ಲಾ ಸಂಗ್ರಹಿಸಿ, ಬರೆದು ಇಡುತ್ತಿದ್ದೆ. ಈಗಲೂ ಅದು ನನಗೆ ಜೀವನದಲ್ಲಿ ದಾರಿಬೆಳಕಾಗಿದೆ. ಒಮ್ಮೆ ಅವರು (ಕಿಟ್ಟಿ ಅಣ್ಣಾ) ನಮ್ಮ ಮನೆಗೆ ಬಂದಾಗ "ನೀವು ಒಂದು ಹಿತನುಡಿ ಬರೆದು. ಕೊಡಿ" ಎಂದೆ. **"ಭಜೋ ಹರಿನಾಮ ನಿರಂತರ, ಭಜೋ ಮಧುರ ಹರಿನಾಮ ನಿರಂತರ"** ಎಂದು ಬರೆದರು. ಇದಕ್ಕಿಂತ ಜೀವನದಲ್ಲಿ ಇನ್ನು **ಯಾವ ದೀಕ್ಷೆ ಬೇಕು?** ಅವರ ಅನಂತ ಆಶೀರ್ವಾದದಿಂದ ನನ್ನ ಬಾಳಿನಲ್ಲಿ ನಿರಂತರ ನಾಮ ಸಂಕೀರ್ತನೆ ನಡೆಯುತ್ತಿದೆ. ಇಂದಿಗೂ, ಆ ರಕ್ಷಾ ಕವಚದಲ್ಲಿ ಮುನ್ನಡೆವೆ.



* * * * *

### ಅವರ ಹಿತ ನುಡಿಗಳು ನಮಗೆ:

✍ ಉಡುಪಿಕೃಷ್ಣ ಕುಲಕರ್ಣಿ
ಸಂಸ್ಕೃತ ಅಧ್ಯಾಪಕರು
ಸ್ವಾಮಿ ವಿವೇಕಾನಂದ ವಿದ್ಯಾಶಾಲೆ
ಪ್ರೌಢಶಾಲೆ

- ಒಳಿತು ಕುಳಿತು ಕೇಳಿ ಮರೆತು ನೀ ಹೋಗಬೇಡ
- ಕಳೆದುಹೋದ ಸಮಯ ಹುಡುಕಲೆತ್ನಿಸಬೇಡ
- ಇದ್ದ ಸಮಯವ ನೀ ಕೇಡು ಮಾಡಬೇಡ
- ಬಾಗಿ ನಡೆದರೆ ಒಳಿತು, ಜಂಭಪಡಬೇಡ।

ಯಾರೋ ಅಂದ ಮಾತಿಗೆ ನೀ ನೊಂದುಕೊಳ್ಳಬೇಡ
ಸಾಧಿಸಬೇಕಾದುದನ್ನು ಅರ್ಧಕ್ಕೆ ನಿಲ್ಲಿಸಬೇಡ
ಒಳ್ಳೆಯ ಮಾತಿಗೆಲ್ಲ ನೀ ಕಿವುಡನಾಗಬೇಡ।

ಸೋತೆನೆಂದು ಮೂಕನಾಗಬೇಡ
ಗೆದ್ದವೆಂದು ಬೀಗುವುದು ಬೇಡ
ಕೃಷ್ಣಸ್ವಾಮಿಯವರ ಈ ಹಿತನುಡಿ ನೀ ಮರೆಯಬೇಡ



# ಕಿಟ್ಟಿ ಮಾಮ

✍ ಉಮೇಶ್ ಈ. ಜೋಯಿಸ್

ಅದೊಂದು ದಿನ ಬೆಳಗ್ಗೆ ಪೇಪರುಗಳಲ್ಲಿ ಭಾಗ್ಯಾ ಫೈನಾನ್ಸ್ ವಂಚನೆಯ ಪ್ರಕರಣ ವರದಿಯಾಗಿತ್ತು. ಅದರಲ್ಲಿ ಹಣ ಹೂಡಿದ್ದ ಎಷ್ಟೋ ಜನ ದಿಕ್ಕೆಟ್ಟು, ಆ ಕಟ್ಟಡದ ಮುಂದೆ ಎದೆ ಬಡಿದು ರೋದಿಸುತ್ತಿದ್ದರು. ನಮ್ಮ ಮನೆಯಲ್ಲಿ ಚಂದ್ರುಮಾಮ (ಎಸ್. ಎನ್. ಚಂದ್ರ ಶೇಖರ್), ಆಗ ತಾನೇ ಸ್ನಾನ ಮುಗಿಸಿ ಬಂದ ಕಿಟ್ಟಿ ಮಾಮಗೆ (ಎನ್. ಕೃಷ್ಣಸ್ವಾಮಿ) ಕೇಳಿದರು, "ನೀನೂ ಸಾವಿತ್ರಿ ಬಾವಾರಿಗಾಗಿ ಬಡ್ಡಿ ಬರುವಂತೆ ಭಾಗ್ಯಾ ಫೈನಾನ್ಸ್‌ನಲ್ಲಿ ಹಣ ಇಟ್ಟಿದ್ದೆಯಲ್ಲಾ?" "ಹೌದು" ಎಂದು ಉತ್ತರ ಬಂತು. ಈಗ? ಒಂದು ಕೈ ಮೇಲೆತ್ತಿ ಮುಗುಳ್ನಗುತ್ತಾ "ಹೋಯ್ತು" ಎಂದು ನಿರಾತಂಕವಾಗಿ ಬಟ್ಟೆ ಒಣ ಹಾಕಲು ಮುಂದುವರೆದರು ಕಿಟ್ಟಿಮಾಮ!

ನಾನು ಚಿಕ್ಕವನಿದ್ದಾಗ, ಕಿಟ್ಟಿಮಾಮ ತಮ್ಮ ಸ್ಕೂಟರಿನಲ್ಲೇ ನನ್ನನ್ನು ಶಾಲೆಗೆ ಬಿಡುತ್ತಿದ್ದುದು ಮರೆಯುವಂತಿಲ್ಲ. ಶನಿವಾರಗಳಂದು ಮನೆಗೆ ಏನಾದರೂ ಸಿಹಿ ತಿಂಡಿಗಳನ್ನು ತರುತ್ತಿದ್ದರು. ಪುಣೆಯಿಂದ ಬೆಂಗಳೂರಿಗೆ ಬರುತ್ತಾರೆಂದು ತಿಳಿದರೆ ಸಾಕು, ನಾನೂ ನನ್ನಕ್ಕ ಅವರ ಹಾದಿ ಕಾಯುತ್ತಿದ್ದೆವು. ಬೀದಿಯಲ್ಲಿ ಬರುವ ಪ್ರತಿಯೊಂದು ಆಟೋ ಅವರನ್ನೇ ಕರೆತರುವ ಭರವಸೆ ತರುತ್ತಿತ್ತು. ಮತ್ತೆ ನಿಲ್ಲದೆ ಮುಂದೆ ಸಾಗಿದಾಗ ಕೋಪ! ಕೊನೆಗೂ ಅವರು ಬಂದ ಸಡಗರದಲ್ಲಿ ಇದೆಲ್ಲವೂ ಸಾರ್ಥಕ ಎನಿಸುತ್ತಿತ್ತು.

ನಮ್ಮ ಮಾವಂದಿರನ್ನು ನಡೆದಾಡುವ ವಿಶ್ವಕೋಶಗಳೆಂದು ಪರಿಗಣಿಸುವುದು ಸಾಮಾನ್ಯ ಮಾತು. ಅದರಲ್ಲೂ ಕಿಟ್ಟಿಮಾಮ ವಿಜ್ಞಾನ, ವಿವೇಕ, ವೈರಾಗ್ಯಗಳ ಜ್ಞಾನ ಸಂಪತ್ತು. ಅವರಿಂದ ಕಲಿತ ಪಾಠಗಳು ಎಣಿಕೆಗೆ ಸಿಗಲಾರವು. ತಿಮ್ಮಯ್ಯ ಉದ್ಯಾನದಲ್ಲಿ, ಗುಡಿಯ ಸುತ್ತ ಪ್ರದಕ್ಷಿಣೆ ಮಾಡುತ್ತಾ ದಕ್ಷಿಣಾಮೂರ್ತಿಸ್ತೋತ್ರ ಹೇಳುವುದು ಅವರ ವಾಡಿಕೆ. ತಾರುಣ್ಯದಲ್ಲಿ ನಾನೂ ಅವರೊಡನೆ ತಿರುಗುತ್ತಾ ಪುಸ್ತಕವನ್ನೂ ನೋಡದೆ, ಈ ಸ್ತೋತ್ರವನ್ನು ಕಲಿತಿದ್ದೆ. ನನ್ನ ನಂತರದ ಜೀವನ ಕ್ರಮದಿಂದಾಗಿ ಇದು ಮರೆತುಹೋಯಿತು. ಈಚೆಗೆ ಮತ್ತೆ ಕಲಿಯಲು ಪ್ರಯತ್ನ ನಡೆದಿದೆ, ಆದರೆ ಸಫಲವಾಗಿಲ್ಲ.

ಕಿಟ್ಟಿಮಾಮ ಭಾಗವಹಿಸದ ಮನೆಯ ಯಾವ ಕೆಲಸವೂ ಪೂರ್ಣವೆನಿಸುವುದಿಲ್ಲ. ಮೊದಲಿಂದಲೂ ಹಲಸಿನ ಹಣ್ಣು ಸುಲಿಯುವುದರಿಂದ ಹಿಡಿದು ಬೇರೆ ಅಡುಗೆಗಳಲ್ಲಿ ಅವರು ಸೇರಲು ಸ್ವಾಗತವಿದ್ದೇ ಇರುತ್ತದೆ. ಈಗಲೂ ಏನಾದರೂ ಬಿಸಿ ಬಿಸಿಯಾಗಿ ತಿಂಡಿ ತಯಾರಾದಾಗ ಅವರಿಗೆ ಕೊಟ್ಟು, ಅವರು ಬಿಸಿ ಅರಿಸಿಕೊಂಡು ಸವಿಯುವುದನ್ನು ನೋಡುವುದೇ ಮಜಾ.

ಮಹಾತ್ಮಗಾಂಧಿಯವರ ಪ್ರಭಾವ ಕಿಟ್ಟಿಮಾಮರ ಜೀವನಕ್ರಮದಲ್ಲಿ ಎದ್ದುಕಾಣುತ್ತದೆ. ಸತ್ಯ, ಪ್ರೇಮ, ತ್ಯಾಗ ಮತ್ತು ಸರಳತೆ. ನಾನು ಸಣ್ಣವನಿದ್ದಾಗಲೇ ಕಿಟ್ಟಿಮಾಮ ನನಗೆ ಹೇರ್‌ಕಟ್ ಮಾಡಿದ್ದರು. ಅವರು ಬಹಳ ಮುಂಚಿನಿಂದಲೂ ತಮ್ಮ ಕ್ಷೌರ ತಾವೇ ನಿಪುಣತೆಯಿಂದ ಮಾಡಿಕೊಳ್ಳುತ್ತಾರೆ. ಪಾಪುಮಾಮ, ಗಣೇಶಮಾಮ ಮತ್ತು ನಾನೂ ಕೂಡ ಹಜಾಮತ್ತಿಗೆ ಹೋಗುವುದು ನಿಲ್ಲಿಸಿ ಕಾಲವಾಗಿದೆ.

ಕಿಟ್ಟಿಮಾಮ ಖಾದಿ ಮಾತ್ರ ಧರಿಸುತ್ತಾರೆ. ಬಟ್ಟೆ ಹಳೆಯದಾದರೂ ಧರಿಸುತ್ತಾರೆ. ಆದರೆ, ಹರಿದಿದ್ದರೆ ಖಂಡಿತ ಹೊಲಿದಿರುತ್ತಾರೆ. ನನ್ನ ದೊಡ್ಡಮ್ಮ, "ಇರುವ ದುಡ್ಡೆಲ್ಲಾ ಕೊಟ್ಟುಬಿಡುತ್ತಾರೆ, ತಮ್ಮ ಬಟ್ಟೆಗಾಗಿ ಸ್ವಲ್ಪವಾದರೂ ಖರ್ಚು ಮಾಡಬಾರದೆ?" ಎಂದೆಲ್ಲಾ ಆಲೋಚನೆ ಮಾಡಿದರೂ, ತಮ್ಮನಂತೆ ತಾವೂ ಬಟ್ಟೆಗಾಗಿ ಖರ್ಚು ಮಾಡಲು ಅಷ್ಟೇ ಹಿಂಜರಿಯುತ್ತಾರೆ. ಇನ್ನು ಟಪಾಲಿನ ಲಕೋಟೆಗಳು ತಮಗೆ ತಲುಪಿದ ಮೇಲೆ, ಕಿಟ್ಟಿಮಾಮ ಅಂಚುಗಳನ್ನು ಬಿಡಿಸಿ, ಹಿಂದಕ್ಕೆ ಮಡಿಸಿ ಅಂಟಿಸಿ ಉಪಯೋಗಿಸುವುದು ಹೊಸ ಲಕೋಟೆಗೆ ಹಣವಿಲ್ಲ ಎಂದಲ್ಲ, ಜಿಪುಣತನವೂ ಅಲ್ಲ. ಕಾಗದ ಪೋಲಾಗಬಾರದೆಂಬ ಉದ್ದೇಶ. ಹೀಗೆಲ್ಲಾ ಉಳಿಸಿದ ಕಿಟ್ಟಿಮಾಮರ ಹಣ ಸ್ಕೂಲಿಗೆ, ಯಾರದಾದರೂ ಕಷ್ಟಕ್ಕೆ ಲೋಕೋಪಯೋಗದ ಸಾರ್ಥಕ ಬಳಕೆಯಾಗುತ್ತಿದೆ. ಶಾಲೆಗಾಗಿ ಹಣದ ಗಳಿಕೆ. ಭಜನೆಗಳಿಂದ ಅವರು ಹಾಡಿದ, ಕಲಿಸಿದ ಭಕ್ತಿಗೀತೆಗಳು ಅಸಂಖ್ಯಾತ. ಅವರ ಸುಶ್ರಾವ್ಯಕಂಠದಿಂದ ಹೊಮ್ಮುವ ಹಾಡುಗಳು ಮನತಟ್ಟಿ ಭಕ್ತಿರಸವನುಣಿಸುತ್ತವೆ. ಹೀಗೆಯೇ ಇವರ ಬಗ್ಗೆ ಗ್ರಂಥಮಾಲೆಯೇ ರಚಿಸಬಹುದು. ಅವರ ಮೌಲ್ಯಗಳಿಂದ ಜೀವನವೇ ಉದ್ಧಾರವೆನಿಸಲು ಸಾಕು.

ನನ್ನ ಜೀವನವೂ ಕಿಟ್ಟಿಮಾಮರ ಶ್ರೇಷ್ಠ ವ್ಯಕ್ತಿತ್ವದ ಹೊಂಬೆಳಕಿನಲ್ಲಿ ಬೆಚ್ಚಗಿದೆ. ಇದು ದೇವರ ಕರುಣೆ, ನನ್ನ ಸೌಭಾಗ್ಯ. ❐

# ಸಹೃದಯಿ ಮಾರ್ಗದರ್ಶಿ

✍ ಎಚ್. ಎಸ್. ಕೇಶವ ಮೂರ್ತಿ

ನಾನು ಅವರಲ್ಲಿ ಕಂಡಿದ್ದು ಭಕ್ತಿಗೀತೆಗಳನ್ನು ಭಾವನೆಯಿಂದ ಹೇಳಿಕೊಡುವ ಮೇಷ್ಟ್ರು, ಆಪತ್ತಿನ ಬಂಧು, ಶಿಸ್ತಿನ ಆಧ್ಯಾತ್ಮಿಕ ವ್ಯಕ್ತಿ, ಮಿತಭಾಷಿ ಮತ್ತು ಹಿತೈಷಿ.

ನಮ್ಮ ತಂದೆಯವರು ತಮ್ಮ ಮಕ್ಕಳು ಬೆಳಗ್ಗೆ ಮತ್ತು ಸಾಯಂಕಾಲ ದೇವರಲ್ಲಿ ಪ್ರಾರ್ಥಿಸುವಾಗ ಹೇಳಿಕೊಡುತ್ತಿದ್ದರಂತೆ – "ಕೃಷ್ಣಾ, ನಿನ್ನಲ್ಲಿ ಭಕ್ತಿ ಕೊಡು, ನೀನು ನನಗೆ ಸ್ನೇಹಿತನಾಗು" ಎಂದು. ನಾನು ಅತಿ ಚಿಕ್ಕವಯಸ್ಸಿನವನಾಗಿದ್ದಾಗ ನನಗೆ ಈ ಸವಿಮಾತನ್ನು ಕೇಳುವ ಭಾಗ್ಯ ದೊರಕಲಿಲ್ಲ. ಆದರೆ ಮುಂದೆ ನನ್ನ ಜೀವನದಲ್ಲಿ ಕಿಟ್ಟಿ ಮೇಷ್ಟ್ರು ಹಿರಿಯ ಹಿತೈಷಿಗಳಾದದ್ದು ಬಹಳ ಸತ್ಯ. ಅವರ ಸಹಾಯ ಸಹೃದಯ, ಉತ್ತೇಜನ ನನಗೆ ದೊರಕದಿದ್ದರೆ ನಾನು ಈಗಿನ ಉತ್ತಮಸ್ಥಿತಿಗೆ ಬರಲು ಸಾಧ್ಯವಿರುತ್ತಿರಲಿಲ್ಲ.

ನನಗೆ ವಿವೇಕಾನಂದ ಬಾಲಕ ಸಂಘದಲ್ಲಿ ಪರಿಚಯವಾದ ಹಲವು ಅಸಾಧಾರಣ ವ್ಯಕ್ತಿಗಳಲ್ಲಿ ಶ್ರೀ ಕಿಟ್ಟಿ ಮೇಷ್ಟ್ರು ಬಹು ಮುಖ್ಯರು. ವಾರಕ್ಕೆ ಒಂದು ಸಾಯಂಕಾಲ ಅವರಿಂದ ಗಾಯನ ಶಿಕ್ಷಣ. ಬೇರೆ ತರಗತಿಗಳಲ್ಲಿ ಸ್ವಲ್ಪ ತೂಕಡಿಸಲು ಅವಕಾಶವಿರುತ್ತಿತ್ತು. ಆದರೆ ಕಿಟ್ಟಿ ಮೇಷ್ಟ್ರು ಹೇಳಿಕೊಡುತ್ತಿದ್ದ 'ಗಾಯಿಯೆ ಗಣಪತಿ', 'ಬಂ ಬಂ ಹರ ಹರ' ಇತ್ಯಾದಿ ಹಾಡುಗಳನ್ನು ಕಲಿಯುವಾಗ ಎಲ್ಲಿ ಬಂತು ತೂಕಡಿಕೆ? ಅವರು ಹೇಳಿಕೊಟ್ಟ ಹಾಡುಗಳು ಶಾಶ್ವತವಾಗಿ ನೆಲೆಸಿವೆ ನನ್ನ ಮನಸ್ಸಿನಲ್ಲಿ, ಹೃದಯದಲ್ಲಿ. ಈಗಲೂ ಪ್ರತಿದಿನ ಬೆಳಗ್ಗೆ ಅವರ ಧ್ವನಿಮುದ್ರಿಕೆಯನ್ನು ಕೇಳುತ್ತ ವ್ಯಾಯಾಮವಾಗಲಿ ಅಥವಾ ಕಾಫಿ ಸೇವನೆಯಾಗಲಿ ಸಾಗುತ್ತಿರುತ್ತದೆ. ಅದನ್ನು ಕೇಳಿದ ನಂತರ ಇತರ ಧ್ವನಿಮುದ್ರಿಕೆಯನ್ನು ಹಾಕುತ್ತೇನೆ.

ನಾನು ಇಂಟರ್ ಮೀಡಿಯೆಟ್ ಓದುತ್ತಿದ್ದಾಗ ಅನೇಕ ಜನರಿಗೆ ತಗಲುವಂತೆ ನನಗೂ ಸಹ ಕಷ್ಟ ಕಾರ್ಪಣ್ಯಗಳ ಸುರಿಮಳೆ ಬಂದು ದಿಕ್ಕುತೋಚದಾಯಿತು. ಮೊದಲನೆಯದಾಗಿ ನನಗೆ ಭೌತಶಾಸ್ತ್ರದಲ್ಲಿ ಆಸಕ್ತಿ ಕಡಿಮೆಯಾಯಿತು, ಅರ್ಥವಾಗುತ್ತಿರಲಿಲ್ಲ. ಮಂದನಾಗಿಬಿಟ್ಟೆ. ಹಾಗೂ ದಿನದ ಒಂದು ಹೊತ್ತು ಊಟಕ್ಕೂ ಸಹ ಪರದಾಡುವ ಪರಿಸ್ಥಿತಿಯನ್ನು ಎದುರಿಸಲು ಅಸಮರ್ಥನಾದೆ.

ಒಂದು ದಿನ ಎಂದಿನಂತೆ ಬಾಲಕ ಸಂಘದ ಸಾಯಂಕಾಲದ ಚಟುವಟಿಕೆ, ಪ್ರಾರ್ಥನೆ ಮುಗಿಸಿಕೊಂಡು ಮನೆಗೆ ಹೋದೆ. ಮನೆಯಲ್ಲಿ ಊಟಕ್ಕೆ ಏನೂ ಇರಲಿಲ್ಲ. ಮತ್ತೊಬ್ಬ ಹಿತೈಷಿಗಳಾದ ದಿವಂಗತ ಶ್ರೀ ರಾಮರಾವ್, ಶ್ರೀ ರಾಜಾರಾಮ್ (ಈಗ U.S.A.) ಮತ್ತು ಶ್ರೀ ವಾಸುದೇವನ್ ಈ ತರಹದ ಸಮಯದಲ್ಲಿ ಏನಾದರೂ ಸಹಾಯ ಮಾಡುತ್ತಿದ್ದರು. ಆ ದಿನ ಯಾರೂ ಸಿಗಲಿಲ್ಲ. ಸುಮಾರು 9½ ಗಂಟೆ ಸಮಯ. ಕಿಟ್ಟಿ ಮೇಷ್ಟ್ರು ಆಗ ಬುಲ್‌ಟೆಂಪಲ್ ರಸ್ತೆಯ ಶ್ರೀ ಗಂಜಾಂ ಕಲ್ಯಾಣ ಮಂಟಪವಿರುವ ಸ್ಥಳದಲ್ಲಿಯೇ ಬಾಡಿಗೆ ಮನೆಯಲ್ಲಿ ವಾಸವಾಗಿದ್ದರು. ನಾನು ಅವರ ಮನೆಗೆ ಬಹಳ ಹಿಂಜರಿಯುತ್ತ ಹೋದೆ. ಅವರ ರೂಮಿನ ಒಂದು ಬಾಗಿಲು ಹಾಕಿತ್ತು. ಒಳಗಡೆ ಕಿಟ್ಟಿ ಮೇಷ್ಟರು ಮಲಗಲು ತಯಾರಾಗುತ್ತಿದ್ದರೋ ಏನೋ ಬಹಳ ಸಂಕೋಚದಿಂದ ಮುಂದಿನ ಮೆಟ್ಟಿಲುಗಳನ್ನು ಹತ್ತಿ ಅವರ ಕೊಠಡಿಯ ಹತ್ತಿರ ಸ್ವಲ್ಪ ಹೊತ್ತು ನಿಂತೆ. ಅವರು ನನ್ನನ್ನು ನೋಡಿದರು. ಸ್ವಲ್ಪ ಆಶ್ಚರ್ಯವಿತ್ತು ಅವರ ಮುಖದಲ್ಲಿ. ಏಕೆಂದರೆ ಆ ಹೊತ್ತಿನಲ್ಲಿ ಯಾರು ಬರುವರು? ಅದರಲ್ಲಿಯೂ ಬಾಲಕ ಸಂಘದ ಯುವಕ. ಏನು ಇಷ್ಟು ಹೊತ್ತಿನಲ್ಲಿ? ಏನಾಗಬೇಕು? ಎಂದು ಕೇಳಿದರು. ನಾನು ಏನೋ ಹೇಳಲು ಹೊರಟೆ. ಬಾಯಿ ಒಣಗಿತು. ಜೋರಾಗಿ ಅತ್ತುಬಿಟ್ಟೆ. ತಕ್ಷಣವೇ ಎದ್ದುಬಂದು ನನ್ನ ತಲೆಯ ಮೇಲೆ ತಮ್ಮ ಕೈ ನೇವರಿಸಿ, ತಮ್ಮ, ನಾನಿದ್ದೇನೆ. ಏನು ಭಯ? ಏನಾಯಿತು? ಎಂದು ಕೇಳಿದರು. ಸ್ವಸ್ಥಿತಿಗೆ ಬರಲು ಸ್ವಲ್ಪ ಸಮಯವಾಯಿತು. ನಂತರ ಹೇಳಿದ ನನಗೆ ಹಣದ ಕೊರತೆ ಎಂದು. ತಕ್ಷಣವೇ ಒಳಗೆ ಹೋಗಿ 30 ರೂ. ತಂದು ನನ್ನ ಕೈಗಿತ್ತು, ನಿನಗೆ ದುಡ್ಡು ಬೇಕು ಅಂತ ಕಂಡ ತಕ್ಷಣ ನನ್ನನ್ನು ಕೇಳು ಎಂದು ಭರವಸೆ ಇತ್ತರು. ಆ ಮಾತಿನಂತೆ ನನ್ನ ಇಂಜನಿಯರಿಂಗ್ (ಅಂದರೆ ಪೂರ್ಣ

ಎಂಟು ವರ್ಷ ವಿದ್ಯಾಭ್ಯಾಸ) ಮುಗಿಯುವವರೆಗೆ ನನಗೆ ಸಹಾಯ ಮಾಡಿದ ಮಹಾನ್ ವ್ಯಕ್ತಿಯಾದರು. ಹಾಗೂ ನನಗೆ ಭೌತಶಾಸ್ತ್ರದಲ್ಲಿ ತರಪೇತಿ ಕೊಟ್ಟರು. ನಂತರ ಇಂಜಿನಿಯರಿಂಗ್ ಸೇರಿದಾಗ ಗಾಂಧಿಬಜಾರಿನಿಂದ ಆಗಿನ UCE (KR Circle) ಕಾಲೇಜಿಗೆ ನಡೆದುಕೊಂಡು ಹೋಗುತ್ತಿದ್ದೆ. ಕಾಲೇಜು ಸೇರಿ ಹದಿನೈದು ದಿನವಾದ ಮೇಲೆ ಅವರಿಗೆ ತಿಳಿಸಲು ಹೋದೆ. ಬಹಳ ಸಂತೋಷ ಪಟ್ಟರು. ಕೇಶವ ಹೇಗೆ ಕಾಲೇಜಿಗೆ ಹೋಗುತ್ತೀಯೆ ಎಂದು ಕೇಳಿದರು. ನಾನು ಏನೂ ತವಕವಿಲ್ಲದೆ 'ನಡೆದುಕೊಂಡು' ಅಂದೆ. ಒಂದು ನಿಮಿಷ ಬಿಟ್ಟು ನಾಳೆ ಈ ಸಮಯಕ್ಕೆ ಬಾ ಎಂದರು. ಏತಕ್ಕೆಂದು ನನಗೆ ತಿಳಿಯದಾಯಿತು. ಸರಿ, ಮಾರನೇ ದಿನ ಹೋದಾಗ 300 ರೂ. ನನ್ನ ಕೈಗಿತ್ತು ಇದರಿಂದ ಬೈಸಿಕಲ್ ತೆಗೆದುಕೋ. ನಡೆಯಲು ಸಾಧ್ಯವಿಲ್ಲ ಎಂದು ಹೇಳಿದರು. ನನಗೆ ನಂಬಲಸಾಧ್ಯ. ಅವರ ಪಾದಸ್ಪರ್ಶ ಮಾಡಿ ಆನಂದಾಶ್ರುವಿನಿಂದ ಮನೆಗೆ ಹಿಂತಿರುಗಿದೆ. ತಮ್ಮ ಜೀವನದಲ್ಲಿ ನನಗಿಂತ ಹತ್ತಾರು ಪಟ್ಟು ಕಷ್ಟಪಟ್ಟು ಮುಂದೆ ಬಂದ ಮಹಾವ್ಯಕ್ತಿ ನನ್ನ ಚಿಕ್ಕ ತೊಂದರೆಯನ್ನು ನಿವಾರಿಸಲು ಮುಂದೆ ಬಂದರು. ಮುಂದೆ ನನ್ನ ಲಂಡನ್ ಪ್ರವಾಸಕ್ಕೆ ಸಿಂಡಿಕೇಟ್ ಬ್ಯಾಂಕಿನವರು ನನಗೆ co-signer ಇಲ್ಲದೆ ನನ್ನ ವಿಮಾನದ ಟಿಕೆಟ್ಟಿನ ಹಣವನ್ನು ಸಾಲ ಕೊಡಲು ನಿರಾಕರಿಸಿದಾಗ, ಮತ್ತೊಮ್ಮೆ ಮುಂದೆ ಬಂದರು, ಕೃಷ್ಣನಂತೆಯೇ ಬೆಂಬಲಿಗರಾದರು ನನ್ನ ಕಿಟ್ಟಿ ಮೇಷ್ಟು. ನನ್ನ ಜೀವನದ ಈ ಅಮೂಲ್ಯ ವ್ಯಕ್ತಿಯನ್ನು ಬಹಳ ವರ್ಷಗಳಿಂದ 'ಮಹಾರಾಜ್' ಎಂದು ಸಂಬೋಧಿಸುತ್ತಿದ್ದೇನೆ. ನನ್ನ ಅಂತರಾತ್ಮ ಅವರನ್ನು 'ಸ್ವಾಮೀ ಕೃಷ್ಣಾ' ಎಂದು ಸಂಬೋಧಿಸುತ್ತದೆ.

ಬಹಳಷ್ಟು ವರ್ಷಗಳಾದ ಮೇಲೆ ನಾನು, ಮಹಾರಾಜ್ ನೀವು ನನಗೆ ಬಹಳವಾಗಿ ಧನಸಹಾಯ ಮಾಡಿದ್ದೀರಿ. ಅದನ್ನು ಕೃತಜ್ಞತೆಯಿಂದ ಹಿಂದಿರುಗಿಸುತ್ತೇನೆ ಅಂದಾಗ ಅವರೆಂದರು — "ನಾನೇನು ಮಾಡಲಿ ಆ ಹಣದಿಂದ. ನನಗೆ ಸಾಕಷ್ಟಿದೆ. ನೀನು ಸಂತೋಷವಾಗಿರು" ಎಂದು.

ಅವರು ಸಹಗಾಯಕರೊಡನೆ ಅಮೇರಿಕೆಗೆ ಬಂದಾಗ ಅವರನ್ನು ಒಂದೆರಡು ಸ್ಥಳಕ್ಕೆ ಭಜನೆಗೆ ಕರೆದೊಯ್ಯುವ ಸದವಕಾಶ ದೊರಕಿತು. ನನಗೆ ಅದರಿಂದ ತೃಪ್ತಿ ಆನಂದ ಬಹಳಷ್ಟು ದೊರೆಯಿತು. ಅವರು ಬರೆದ 'ವಂಶವೃಕ್ಷ'ವನ್ನು ಓದಿದ ಮೇಲೆ ನನಗೆ ಅರಿವಾಯಿತು. ಈ ಮಹಾನ್ ವ್ಯಕ್ತಿಗೆ ರೂಪುಕೊಟ್ಟವರು ಹಲವಾರು ಅದ್ಭುತ ಜೀವಿಗಳು — ಅವರ ಭವ್ಯ ಮಾತಾಪಿತೃಗಳೆ. ಆ ವಂಶವೃಕ್ಷಕ್ಕೂ ನನ್ನ ನಮಸ್ಕಾರ.

ಹೋದ ವರುಷ (2005ರಲ್ಲಿ) ಭೇಟಿಯಾದಾಗ ಅವರ ತಮ್ಮ ಶ್ರೀ ಗಣೇಶನೊಡನೆ ಮಾತನಾಡುವಾಗ, ಗಣೇಶ ನಾನು ಇಷ್ಟು ಮುಂದೆ ಬರಲು ನಿಮ್ಮ ಅಣ್ಣ ಸಹಾಯ ಮಾಡಿದ್ದು ನಿನಗೆ ಗೊತ್ತೆ ಎಂದು ಕೇಳಿದೆ. ಅವನು ಹೇಳಿದ, "ಹೌದಾ, ಮನೆಯಲ್ಲಿ ಯಾರಿಗೂ ತಿಳಿಯದು. ನನಗೇನೇ ಪರೀಕ್ಷಾಶುಲ್ಕವೆಂದು ಸಾವಿರಾರು ರೂಪಾಯಿ ಕೊಟ್ಟ. ನಾನು ಪಾಸದೆನೋ, ಫೇಲಾದೆನೋ ಎರಡನ್ನೂ ಕೇಳಲಿಲ್ಲ. ನನಗೆ ಪೂರ್ಣ ಸ್ವಾತಂತ್ರ್ಯ ನೀಡಿದ" ಎಂದು ತನ್ನ ಅಣ್ಣ ಕಿಟ್ಟಿಯ ಗುಣವನ್ನು ಹೆಮ್ಮೆಯಿಂದ ಹೇಳಿ ಗಹಗಹಿಸಿ ನಕ್ಕುಬಿಟ್ಟ.

ಇದರಿಂದ ತಮ್ಮ ಮನೆಯವರಿಗೇ ಆಗಲಿ ಅಥವಾ ಪರರಿಗೇ ಆಗಲಿ ಯಾರಿಗಾದರೂ ಸಹಾಯ ಮಾಡಿದರೆ ಅವರಿಂದ ಏನೂ ನಿರೀಕ್ಷಿಸುತ್ತಿರಲಿಲ್ಲ. ಅವರವರಿಗೆ ಪೂರ್ಣ ಸ್ವಾತಂತ್ರ್ಯ ನೀಡುವ ಸ್ವಭಾವ ಅವರದು.

ಶ್ರೀಗಂಧದ ವೃಕ್ಷವನ್ನು ಎಲ್ಲರೂ ಚೆನ್ನಾಗಿ ವೃದ್ಧಿಸಲಿ ಎಂದು ಆಶಿಸುತ್ತಾರೆ. ಹಾಗೆಯೇ ನಾನು-ನಾವುಗಳು ಹಾರೈಸುತ್ತೇವೆ. ಶ್ರೀಗುರುಮಹಾರಾಜರು ಆರೋಗ್ಯ-ಆನಂದವನ್ನು ನಿಮ್ಮ ಮೇಲೆ ಇನ್ನೂ ಅಧಿಕವಾಗಿ ಕರುಣಿಸಲಿ ಎಂದು ಪ್ರಾರ್ಥಿಸುತ್ತೇನೆ.



* * * * *

# ವಿವೇಕ ದೃಷ್ಟಿ

## (ಶ್ರೀ ವಿವೇಕಾನಂದ ಸೇವಾಶ್ರಮ ಕಣ್ಣಾಸ್ಪತ್ರೆ)

### ಸಂಕ್ಷಿಪ್ತ ಪರಿಚಯ

**ಕೆ. ಎನ್. ಸೀತಾರಾಮ್**, ಕಾರ್ಯನಿರ್ವಾಹಕ ಟ್ರಸ್ಟಿ

### ಶ್ರೀವಿವೇಕಾನಂದ ಸೇವಾಶ್ರಮ

ಭಾರತವು ಹಳ್ಳಿಗಳ ದೇಶ. ಜನರಿಗೆ ಪ್ರಾಥಮಿಕ ಆರೋಗ್ಯವು ಅತಿ ಮುಖ್ಯ. ಆದರೆ ಇಂದು ಇದರಲ್ಲಿಯೂ ಕೊರತೆಯುಂಟಾಗಿ, ವಿಶೇಷವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಜನರು ಬವಣೆಪಡುವಂತಾಗಿದೆ. ಇದನ್ನು ಸಾಧ್ಯವಾದಷ್ಟು ಪರಿಹರಿಸಲು ಮತ್ತು ಬಡಜನತೆಗೆ ವೈದ್ಯಕೀಯ ಸಹಾಯ ಒದಗಿಸಲು ಶ್ರೀ ವಿವೇಕಾನಂದ ಸೇವಾಶ್ರಮವು 2ನೇ ಅಕ್ಟೋಬರ್ 1975ರಂದು ಪ್ರಾರಂಭವಾಯಿತು.

ಸೇವಾಶ್ರಮವು ಈಗ ವಸಂತಪುರ ಮತ್ತು ತಾತಗುಣಿ ಎಂಬ ಎರಡು ಸ್ಥಳಗಳಲ್ಲಿ ಉಚಿತ ವೈದ್ಯಕೀಯ ಸೇವೆಯನ್ನು ಒದಗಿಸುತ್ತಿದೆ.

ತನ್ನ ಮೂರು ದಶಕಗಳ ಸೇವಾವಧಿಯಲ್ಲಿ, ಸೇವಾಶ್ರಮವು ಅನೇಕ ವೈದ್ಯಕೀಯ ಶಿಬಿರಗಳನ್ನು ನಡೆಸಿತು. ಮೊದಲ ಕೆಲವು ವರ್ಷಗಳಲ್ಲಿಯೇ ಬೆಳಕಿಗೆ ಬಂದ ಒಂದು ವಿಚಾರವೆಂದರೆ ಸಹಸ್ರಾರು ಜನರು ಕಣ್ಣಿನ ಪೊರೆಯಿಂದ ಕುರುಡುತನವನ್ನು ಅನುಭವಿಸುತ್ತಿರುವುದು. ಈ ಸಮಸ್ಯೆಯನ್ನು ಎದುರಿಸಲು ಬೆಂಗಳೂರಿನ ಬನಶಂಕರಿಯಲ್ಲಿ ಒಂದು ಮೂಲ ಆಸ್ಪತ್ರೆಯನ್ನು ಸ್ಥಾಪಿಸಲು ನಿರ್ಧರಿಸಲಾಯಿತು. ಇದರ ಫಲವಾಗಿ ಪ್ರಾರಂಭವಾದ ಆಸ್ಪತ್ರೆಯೇ **'ವಿವೇಕ ದೃಷ್ಟಿ'** — ಶ್ರೀ ವಿವೇಕಾನಂದ ಸೇವಾಶ್ರಮ ಕಣ್ಣಾಸ್ಪತ್ರೆ*.

### ವಿವೇಕ ದೃಷ್ಟಿ

ಶ್ರೀವಿವೇಕಾನಂದ ಸೇವಾಶ್ರಮದ ಕಣ್ಣಾಸ್ಪತ್ರೆಯನ್ನು 1998ನೆಯ ಇಸವಿ ಜನವರಿ 26ನೆಯ ತಾರೀಖು ಪ್ರಾರಂಭಿಸಲಾಯಿತು. ಕಳೆದ ಎಂಟು ವರ್ಷಗಳಲ್ಲಿ 6,500 ಪೊರೆಯ ಶಸ್ತ್ರಚಿಕಿತ್ಸೆಯನ್ನು ನೆರವೇರಿಸಿದ್ದೇವೆ. 50,000ಕ್ಕೂ ಅಧಿಕ ಮಂದಿಯ ಕಣ್ಣಿನ ಪರೀಕ್ಷೆಯನ್ನು ಮಾಡಿದ್ದೇವೆ. ಈ ಆರ್ಥಿಕ 2006-2007 ವರ್ಷದಲ್ಲಿ 2500 ಶಸ್ತ್ರಚಿಕಿತ್ಸೆಗಳನ್ನು ನೇರವೇರಿಸಬೇಕೆಂದು ನಿರ್ಧರಿಸಿದ್ದೇವೆ. ಶ್ರೀವಿವೇಕಾನಂದ ಸೇವಾಶ್ರಮದ ಕಣ್ಣಾಸ್ಪತ್ರೆಯಲ್ಲಿ ವಾರಕ್ಕೆ ನಾಲ್ಕು ದಿನ ಪರೀಕ್ಷೆಯನ್ನು, ಒಂದು ದಿನ ಶಸ್ತ್ರಚಿಕಿತ್ಸೆಯನ್ನು ನೆರವೇರಿಸುತ್ತೇವೆ. ಇದರ ಜೊತೆಗೆ, ಮಧುಗಿರಿ, ಮಳವಳ್ಳಿ, ಮರುಗಮಲ್ಲ (ಚಿಂತಾಮಣಿ) ಅಲಕಾಪುರ (ಕೋಲಾರ ಜಿಲ್ಲೆ) ಹೆಬ್ಬೂರು ಮತ್ತು ಸುಗ್ಗನಹಳ್ಳಿ ಈ ತಾಲ್ಲೂಕು ಆಸ್ಪತ್ರೆಗಳಲ್ಲಿಯೂ ನೆರವೇರಿಸುತ್ತೇವೆ.

ಶ್ರೀಮಾತೆ ಶಾರದಾದೇವಿಯವರ 150ನೇ ಜನ್ಮಶತಾಬ್ದವನ್ನು (2003) ಆಚರಿಸುವ ಸಂದರ್ಭದಲ್ಲಿ ವಿವೇಕ ದೃಷ್ಟಿಯ ವತಿಯಿಂದ ಶಾಲಾಮಕ್ಕಳಿಗೆ ಉಚಿತ ನೇತ್ರ ಪರೀಕ್ಷೆಯನ್ನು ಮಾಡುವ **'ವಿವೇಕ ಶಾರದ'** ಎಂಬ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಯಿತು. ಈ ಕಾರ್ಯಕ್ರಮದಡಿಯಲ್ಲಿ, ತೊಂಡೆಬಾವಿ, ಮಾಗಡಿ, ಹೆಬ್ಬೂರು ಗ್ರಾಮಾಂತರ ಪ್ರದೇಶದಲ್ಲಿ 3000ಕ್ಕೂ ಹೆಚ್ಚು ಮಕ್ಕಳಿಗೆ ನೇತ್ರಪರೀಕ್ಷೆಯನ್ನು ಮಾಡಿ ಅದಕ್ಕೆ ಸೂಕ್ತ ಪರಿಹಾರವನ್ನು ನೀಡಲಾಗಿದೆ. ಈ ಕಾರ್ಯಕ್ರಮಕ್ಕೆ ಪ್ರತ್ಯೇಕ ಸಿಬ್ಬಂದಿಯನ್ನು ನೇಮಕ ಮಾಡುವ ಯೋಜನೆ ಇದೆ. ಆದರೆ ಇದಕ್ಕೆ ಮಾನವಸಂಪನ್ಮೂಲ ಹಾಗೂ ಹಣದ ಕೊರತೆಯಿದೆ. ಆದಾಗ್ಯೂ ನಮ್ಮಲ್ಲಿರುವ ಸಂಪನ್ಮೂಲಗಳನ್ನು ಉಪಯೋಗಿಸಿಕೊಂಡು, ದಾನಿಗಳು ಸಕ್ರಿಯ ಪಾತ್ರ ವಹಿಸುವರೆಂಬ ನಂಬಿಕೆಯ ಮೇಲೆ ಈ ಕಾರ್ಯಕ್ರಮವನ್ನು ಮುಂದುವರಿಸಲಾಗಿದೆ.

---

*ಸರಸ್ವತಿ ಆಸ್ಪತ್ರೆಯ ಆವರಣ, ನಂ. 39,
8 'ಬಿ' ಮುಖ್ಯರಸ್ತೆ, ಬನಶಂಕರಿ ಎರಡನೆಯ ಹಂತ,
ಬೆಂಗಳೂರು - 70 ☎ 26766996

## ಆಧುನಿಕ 'ಫೇಕೋ' ಚಿಕಿತ್ಸೆ

ಗ್ರಾಮಾಂತರ ಪ್ರದೇಶದ ಜನರಿಗೆ ಸಂಪೂರ್ಣವಾಗಿ ಉಚಿತ ಸೇವೆಯನ್ನು ನೀಡುತ್ತಿದ್ದೇವೆ. ನಗರ ಪ್ರದೇಶದ ಜನರ ಆರ್ಥಿಕ ಸ್ಥಿತಿಯು ಹಳ್ಳಿಗಾಡಿನ ಜನರಿಗಿಂತ ಉತ್ತಮವಾಗಿರುವುದರಿಂದ ನಗರದ ಜನರಿಗೆ ಆಸ್ಪತ್ರೆಗೆ ಆರ್ಥಿಕ ಸಹಾಯಮಾಡುವಂತೆ ವಿನಂತಿಸಲಾಗುತ್ತಿದೆ. ಕಡುಬಡವರಿಗೆ ಮಾತ್ರ ಉಚಿತ ಚಿಕಿತ್ಸೆಯನ್ನು ನೀಡಲಾಗುತ್ತಿದೆ. ಕೆಳ ಮಧ್ಯಮ ವರ್ಗದವರಿಗೆ ಸಹಾಯವಾಗಲೆಂದು ರಿಯಾಯಿತಿ ದರದಲ್ಲಿ ಪೊರೆಯ ಶಸ್ತ್ರಚಿಕಿತ್ಸೆಯನ್ನು ನೆರವೇರಿಸುತ್ತಿದ್ದೇವೆ.

## ಆರ್ಥಿಕ ಸಹಾಯ

ಶ್ರೀ ವಿವೇಕಾನಂದ ಸೇವಾಶ್ರಮವು ಒಂದು ವಿಶ್ವಸ್ಥ ಸಂಸ್ಥೆಯಾಗಿದ್ದು ಈ ಸಂಸ್ಥೆಯ ಪ್ರಮುಖ್ಯ ಗುರಿಯು ಬಡಬಗ್ಗರ ವೈದ್ಯಕೀಯ ಸೇವೆಯೇ ಆಗಿದೆ. ಸೇವಾಶ್ರಮವು ಸರ್ಕಾರದಿಂದ, ಅನೇಕ ಗಣ್ಯವ್ಯಕ್ತಿಗಳಿಂದ ಮತ್ತು ಸಂಘಸಂಸ್ಥೆಗಳಿಂದ ಸಹಾಯವನ್ನು ಪಡೆಯುತ್ತಿದೆ. ನಿಸ್ವಾರ್ಥಸೇವೆಯನ್ನು ಬಡಬಗ್ಗರಿಗೆ ಸಲ್ಲಿಸುವುದರ ಮೂಲಕವಾಗಿ ಇವರೆಲ್ಲರಿಗೂ ಕೃತಜ್ಞತೆಯನ್ನು ಅರ್ಪಿಸುತ್ತಿದೆ. ಬೆಂಗಳೂರು ಕೇಂದ್ರದಲ್ಲಿ ಸೇವಾಶುಲ್ಕದ ರೂಪದಲ್ಲಿ ಸಂಗ್ರಹವಾಗುವ ಹೆಚ್ಚುವರಿ ಹಣವನ್ನು ಗ್ರಾಮಾಂತರ ಪ್ರದೇಶದ ಬಡಬಗ್ಗರ ಸೇವೆಗಾಗಿ ಸೇವಾಶ್ರಮವು ವಿನಿಯೋಗಿಸುತ್ತಿದೆ.

## ಮಾನವ ಸಂಪನ್ಮೂಲ

ಸೇವಾಶ್ರಮದಲ್ಲಿ ದುಡಿಯುತ್ತಿರುವವರೆಲ್ಲರೂ ಸ್ವಯಂ ಸೇವಕರು. ಇವರಾರಿಗೂ ಬೇರೆ ಯಾವ ರೀತಿಯ ಆಸಕ್ತಿಯು ಇರುವುದಿಲ್ಲ. ಕೇವಲ ಆತ್ಮತೃಪ್ತಿಗಾಗಿಯೇ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಇವರಲ್ಲಿ ಶಸ್ತ್ರಚಿಕಿತ್ಸೆಯನ್ನು ಮಾಡುವ ವೈದ್ಯರೂ ಮತ್ತು ದೃಷ್ಟಿಪರೀಕ್ಷಕರೂ ಅನೇಕರಿದ್ದಾರೆ. ತಮ್ಮ ತಮ್ಮ ವೃತ್ತಿಗಳಲ್ಲಿ ನಿವೃತ್ತಿ ಹೊಂದಿರುವ ಅನೇಕ ಪರಿಣತರಿದ್ದಾರೆ. ಇವರೆಲ್ಲರಿಗೂ ಸೇವಾಶ್ರಮವು ಕೃತಜ್ಞತೆಯನ್ನು ಸಲ್ಲಿಸುತ್ತದೆ. ಸ್ವಯಂಸೇವಕರಾಗಿ ಸೇವೆಯನ್ನು ಸಲ್ಲಿಸಲಿಚ್ಛಿಸುವವರನ್ನು ಸೇವಾಶ್ರಮವು ಆದರದಿಂದ ಸ್ವಾಗತಿಸುತ್ತದೆ.

## ಸೇವೆಗಾಗಿ ನಿಮ್ಮ ನೆರವು

ಸೇವಾಶ್ರಮದ ಲೆಕ್ಕಪತ್ರಗಳನ್ನು ಲೆಕ್ಕಪರಿಶೋಧಕರಿಂದ ಪ್ರತಿ ವರ್ಷವೂ ಪರಿಶೀಲನೆ ಮಾಡಿಸಿ ಪ್ರತಿಗಳನ್ನು ಆದಾಯ ತೆರಿಗೆ ಇಲಾಖೆ ಮತ್ತು ಕೇಂದ್ರ ಸರ್ಕಾರದ ಗೃಹ ಇಲಾಖೆಗೆ ಕಳುಹಿಸಿ ಕೊಡಲಾಗುತ್ತಿದೆ. ಸಂಸ್ಥೆಗೆ ಕೊಡುವ ದೇಣಿಗೆಗಳಿಗೆ ಆದಾಯ ತೆರಿಗೆಯ 80ಜಿ ಕಾಯಿದೆಯಂತೆ ವಿನಾಯಿತಿ ಇರುತ್ತದೆ. ಹೊರದೇಶದವರಿಂದ ದೇಣಿಗೆಯನ್ನು ಪಡೆಯಲು ಕೇಂದ್ರ ಸರ್ಕಾರದವರಿಂದ ಅನುಮತಿಯನ್ನು ಪಡೆದಿರುತ್ತದೆ. ನಿರಂತರ ಸೇವೆಗಾಗಿ ತಮ್ಮೆಲ್ಲರ ಹಣಕಾಸಿನ ನೆರವು ಸೇವಾಶ್ರಮಕ್ಕೆ ಅತ್ಯಗತ್ಯ.

ತಮ್ಮೆಲ್ಲರ ಸಹಕಾರ ಮತ್ತು ಸಹಾಯದ ನೆರವಿನಿಂದ ಸೇವಾಶ್ರಮವು ನವನವೀನ ಶಸ್ತ್ರಚಿಕಿತ್ಸಾ ಉಪಕರಣಗಳೊಂದಿಗೆ ಆಧುನಿಕ ತಾಂತ್ರಿಕತೆಯ ಶಸ್ತ್ರಚಿಕಿತ್ಸೆಯನ್ನು ಸಣ್ಣ ಹಳ್ಳಿಯ ಆಸ್ಪತ್ರೆಗಳಲ್ಲಿ ಗ್ರಾಮಾಂತರ ಪ್ರದೇಶದ ಜನರ ಅನುಕೂಲಕ್ಕಾಗಿ ಏರ್ಪಡಿಸುತ್ತಿದೆ. ಫೇಕೋ ಶಸ್ತ್ರಚಿಕಿತ್ಸೆಯನ್ನು ಸಹ ಗ್ರಾಮಾಂತರ ಆಸ್ಪತ್ರೆಗಳಲ್ಲಿ ನೆರವೇರಿಸಿದ್ದೇವೆ.

## ಅಭಿನಂದನೆ

ಶ್ರೀ ವಿವೇಕಾನಂದ ಸೇವಾಶ್ರಮಕ್ಕೆ ಪ್ರೊ. ಎನ್. ಕೃಷ್ಣಸ್ವಾಮಿಯವರು ಅಧ್ಯಕ್ಷರು. ತಮ್ಮ ಸಮಾಜಸೇವಾ ಕಾರ್ಯಗಳಲ್ಲಿರುವ ಕಳಕಳಿ ಮತ್ತು ವಿಶಾಲದೃಷ್ಟಿಯಿಂದಾಗಿ ವಿಶೇಷ ಆದರಾಭಿಮಾನಗಳಿಂದ ಎಲ್ಲರಿಂದಲೂ ಪ್ರೀತಿಗೌರವಗಳನ್ನು ಪಡೆದಿದ್ದಾರೆ. ಇವರಿಗೆ 80 ಸಾರ್ಥಕ ವರ್ಷಗಳು ತುಂಬುವ ಈ ಶುಭಸಂದರ್ಭದಲ್ಲಿ ಸೇವಾಶ್ರಮವು ಅವರನ್ನು ಅಭಿನಂದಿಸುತ್ತದೆ ಮತ್ತು ಶುಭವನ್ನು ಹಾರೈಸುತ್ತದೆ.



* * * * *

# ಸಂಜೆಯ ದೀವಿಗೆಗೆ ಮುಂಜಾನೆ ಹೊಸೆದ ಹೂಬತ್ತಿ

## (ಸ್ವಾಮಿ ವಿವೇಕಾನಂದ ವಿದ್ಯಾ ಸಂಸ್ಥೆ ಮತ್ತು ಕಿಟ್ಟಿಮೇಷ್ಟ್ರು — ಹಿನ್ನೆಲೆ)

✍ ಸಿ. ಎಸ್. ಪ್ರಸನ್ನಕುಮಾರ್
ಕಾರ್ಯದರ್ಶಿ, ಸ್ವಾಮಿ ವಿವೇಕಾನಂದ ಶೈಕ್ಷಣಿಕ ಸಂಸ್ಥೆ

ನಮ್ಮೆಲ್ಲರ ನೆಚ್ಚಿನ, ಆದರಣೀಯ ಪೂಜ್ಯರಾದ ಕಿಟ್ಟಿ ಮೇಷ್ಟರ 80ನೇ ಹುಟ್ಟುಹಬ್ಬದ ಸಂದರ್ಭದಲ್ಲಿ ಅವರ ಜೀವನದಲ್ಲಿ ಅವರು ಮಾಡಿರುವ ಮಹತ್ಕಾರ್ಯಗಳಲ್ಲಿ ನನಗೆ ಎದ್ದುಕಾಣುವುದು ಅವರ ಭಜನಾ ಕಾರ್ಯಕ್ರಮ ಗಳು ಮತ್ತು ಸ್ವಾಮಿ ವಿವೇಕಾನಂದ ವಿದ್ಯಾಶಾಲೆಯ ಬೆನ್ನೆಲುಬಾಗಿ ನಿಂತು, ಅದಕ್ಕೆ ಒಂದು ಭದ್ರ ತಳಪಾಯ ವನ್ನು ಹಾಕಿ, ಶಾಲೆಯ ಸರ್ವತೋಮುಖ ಅಭಿವೃದ್ಧಿಗೆ ಕಾರಣರಾಗಿರುವುದು. ಅತ್ಯಂತ ವಿಪರ್ಯಾಸವೆಂದರೆ ಈ ಶಾಲೆಯನ್ನು 1970ರಲ್ಲಿ ಹುಟ್ಟುಹಾಕುವ ಯೋಚನೆ ಅವರ ಮುಂದಿಟ್ಟಾಗ ಅವರು ಅದನ್ನು ಪೂರ್ಣವಾಗಿ ತಿರಸ್ಕರಿಸಿ ದ್ದರು. ಆದರೆ 1982ರಲ್ಲಿ ನಮ್ಮೆಲ್ಲರ ಕೋರಿಕೆ ಮೇರೆಗೆ, ಶ್ರೀಗುರುಮಹಾರಾಜರ ಪ್ರೇರಣೆಯ ಮೇರೆಗೆ ಶಾಲೆಯ ರೂವಾರಿಯಾಗಿ ಕಾರ್ಯನಿರ್ವಹಿಸಲು ಕಾರ್ಯದರ್ಶಿ ಯಾಗಿ ಮುನ್ನಡೆಸಲು ಒಪ್ಪಿಕೊಂಡು, ಶಾಲೆಗೆ ಸ್ವಂತ ಕಟ್ಟಡವನ್ನು ಕಟ್ಟಿಸಿಕೊಡಲು ಪ್ರಮುಖ ಕಾರಣರಾದರು.

ಕಿಟ್ಟಿ ಮೇಷ್ಟ್ರು ಎಂದಾಕ್ಷಣ ನಮ್ಮ ಮನಸ್ಸಿಗೆ ಬರುವುದು ಅವರ ಭಜನೆ ಮತ್ತು ಶಾಲೆಯೊಂದಿಗಿನ ಅವರ ನಿಕಟ ಸಂಬಂಧ. ಅವರ ಭಜನೆಯ ಮೊದಲ ಅನುಭವ ನನಗೆ ದೊರೆತದ್ದು ಆಶ್ರಮದಲ್ಲಿ. ಅವರ ಎತ್ತರದ ಕಂಠದ ಮಾಧುರ್ಯದ ಸವಿ, ಎಲ್ಲರಿಗೂ ಪರಿಚಿತವಾದದ್ದೇ. ಅವರ ಸಂಗೀತ ಭಕ್ತಿಪ್ರಧಾನವಾದದ್ದು. ಬೇರೆಲ್ಲಾ ವಿಷಯಗಳೂ ಗೌಣ. ಅವರು ಆಶ್ರಮದ ಪ್ರಾರ್ಥನಾ ಮಂದಿರದಲ್ಲಿ ಹಾಡಿದರೆಂದರೆ, ನಾನು ಸಂಪೂರ್ಣವಾಗಿ ಮೈಮರೆಯುತ್ತಿದ್ದೆ. ಒಂದು ರೀತಿಯ ರೋಮಾಂಚನದ ಅನುಭವ. ಅವರ ಭಕ್ತಿಯ ಮಾಧುರ್ಯದಲ್ಲಿ ನನ್ನ ಮನಸ್ಸು ಒಂದಾಗುವ ಅನುಭವ. ಅವರ ಭಜನೆಯಲ್ಲಿ ಎಂತಹ ಚಂಚಲ ಮನಸ್ಸಿನವರನ್ನೂ ಸೆರೆಹಿಡಿದು ಭಗವಂತನಲ್ಲಿ ಮನಸ್ಸನ್ನು ನಿಲ್ಲಿಸುವ ಶಕ್ತಿ ಅಡಗಿದೆ. ಇವರೊಂದಿಗೆ ನೂರಾರು ಕಾರ್ಯಕ್ರಮಗಳಲ್ಲಿ ಭಾಗ ವಹಿಸುವ ಭಾಗ್ಯ ನನ್ನದು.

ಇನ್ನು ಶಾಲೆ, ಇದರ ಆರಂಭದ ಪ್ರಸ್ತಾವನೆ ಅವರ ಮುಂದೆ ಇಟ್ಟಾಗ ಅವರೇನು ಹರ್ಷ ವ್ಯಕ್ತಪಡಿಸಲಿಲ್ಲ. ಆದರೆ ಅವರು ಹೇಗೆ ಈ ಶಾಲೆಯೊಂದಿಗೆ ಒಂದಾದರು. ಇದು ಭಗವಂತನ ಲೀಲೆ. ಶ್ರೀರಾಮಕೃಷ್ಣರು ಈ ಶಾಲೆಯ ಮೇಲೆ ತೋರಿದ ಕೃಪೆ ಮತ್ತು ಅವರ ಇಚ್ಛೆ. ಹಾಗಿಲ್ಲ ದಿದ್ದರೆ ಈ ಶಾಲೆ ಈ ದಿನ ಈ ಸ್ಥಿತಿಯಲ್ಲಿರುತ್ತೋ, ಇಲ್ಲವೋ — ನನಗಂತೂ ಈ ಶಾಲೆಯ ಹಿಂದಿನ ಆಗುಹೋಗುಗಳನ್ನೆಲ್ಲಾ ನೆನೆಸಿಕೊಂಡಾಗ ನಿಜವಾಗಲೂ ಶ್ರೀರಾಮಕೃಷ್ಣರ ಕೃಪಾದೃಷ್ಟಿ ಸದಾಕಾಲ ನಮ್ಮೆಲ್ಲರ ಮೇಲೂ ಇದೆ ಎಂಬ ದೃಢನಂಬಿಕೆ ಯಾವಾಗಲೂ ನನ್ನ ಮನಸ್ಸಿನಲ್ಲಿ ನೆಲೆಸಿರುತ್ತದೆ. ಹಾಗಿಲ್ಲದಿದ್ದಲ್ಲಿ ಕಿಟ್ಟಿ ಮೇಷ್ಟ್ರಂತಹ ಒಬ್ಬ ಧೀಮಂತ ಸತ್ಪುರುಷನನ್ನು ಭದ್ರವಾದ ಅಡಿಗಲ್ಲಿನ ಮೇಲೆ ಈ ಶಾಲೆಯನ್ನು ಮುಂದುವರಿಸಲು ಏಕೆ ನಿಯೋಜಿಸುತ್ತಿದ್ದರು? ಇವರ ಒಂದು ಪ್ರವೇಶದಿಂದ ಶಾಲೆಯ ಎಷ್ಟೊಂದು ಪ್ರಮುಖ ಸಮಸ್ಯೆಗಳು ಬಗೆಹರಿದವು!

**ಶಾಲೆ ಏಕೆ ಪ್ರಾರಂಭಿಸಿದೆವು?**

ನನ್ನ ಶ್ರೀರಾಮಕೃಷ್ಣ ಆಶ್ರಮದ ಸಂಪರ್ಕ 1959-60 ರಲ್ಲಿ ವಿವೇಕಾನಂದ ಬಾಲಕ ಸಂಘದ ಮೂಲಕ. ಆಗ ನನಗೆ 10-11 ವರ್ಷ. ವಿವೇಕಾನಂದ ಬಾಲಕ ಸಂಘದಲ್ಲಿ ನನ್ನ ಮೇಲೆ ಅತ್ಯಂತ ಪ್ರಭಾವ ಬೀರಿದವರು ಪೂಜ್ಯ ಸ್ವಾಮಿ ಶಾಸ್ತ್ರಾನಂದಜಿ, ಸ್ವಾಮಿ ಪ್ರಬುದ್ಧಾನಂದಜಿ, ಸ್ವಾಮಿ ಸುರೇಶಾನಂಜಿ, ಸ್ವಾಮಿ ಭಜನಾನಂದಜಿ, ಶ್ರೀ ರಾಮಚಂದ್ರ ಮಹಾರಾಜ್ (ಸ್ವಾಮಿ ಪುರುಷೋತ್ತಮಾ ನಂದಜಿ), ಶ್ರೀ ರಾಮ್ ಮಹಾರಾಜ್ (ಸ್ವಾಮಿ ದೇವರೂಪಾನಂದಜಿ), ಶ್ರೀ ಲಕ್ಷ್ಮೀನಾರಾಯಣ

ಮಹಾರಾಜ್ (ಸ್ವಾಮಿ ಜಗದಾತ್ಮಾನಂದಜಿ) ಇನ್ನೂ ಅನೇಕ ಬ್ರಹ್ಮಚಾರಿಗಳು ಹಾಗೂ ನೆಚ್ಚಿನ ಕಿಟ್ಟಿ ಮೇಷ್ಟ್ರು. ಇವರೆಲ್ಲರೂ ನಮಗೆ ಬಾಲಕಸಂಘದಲ್ಲಿ ವಿವಿಧ ವಿಷಯಗಳಲ್ಲಿ ತರಗತಿಗಳನ್ನು ತೆಗೆದುಕೊಳ್ಳುತ್ತಿದ್ದರು. ಈ ಸಮಯದಲ್ಲಿ ಪರಮಪೂಜ್ಯ ಶ್ರೀ ಯತೀಶ್ವರಾನಂದಜೀಯವರು ಬೆಂಗಳೂರಿನ ಆಶ್ರಮದಲ್ಲೇ ಇದ್ದರೂ ಅವರೊಂದಿಗೆ ಹೆಚ್ಚು ಸಂಪರ್ಕವಿರಲಿಲ್ಲ. ಏಕೆಂದರೆ ಅವರೊಂದಿಗೆ ಮಾತನಾಡುವ ಶಕ್ತಿಯಾಗಲೀ, ಧೈರ್ಯವಾಗಲೀ ನನ್ನಲ್ಲಿರಲಿಲ್ಲ. ಅವರಿಂದ ಚಾಕಲೇಟ್ ಪಡೆಯುವುದು ಮತ್ತು ಅವರಿಗೆ ಪ್ರಣಾಮ ಸಲ್ಲಿಸುವುದಷ್ಟೇ ನಾನು ಮಾಡುತ್ತಿದ್ದುದು. 1963ರಲ್ಲಿ ಸ್ವಾಮಿ ವಿವೇಕಾನಂದರ ಜನ್ಮಶತಾಬ್ದವನ್ನು ವಿಜೃಂಭಣೆಯಿಂದ ಆಚರಿಸಲಾಯಿತು. ಆಗೆಲ್ಲ ಸಾಕಷ್ಟು ಸ್ಫೂರ್ತಿ ದೊರೆಯಿತು. 1965ಕ್ಕೆ ವಿವೇಕಾನಂದ ಬಾಲಕ ಸಂಘದ ವ್ಯಾಪ್ತಿಯಿಂದ ನಾನು ಹೊರಗೆ ಬರಬೇಕಾಯಿತು. ಏಕೆಂದರೆ ನಾನು ಆ ಹೊತ್ತಿಗೆ P.U.C. ಮುಗಿಸಿದ್ದೆ. 1965ರಲ್ಲಿ ಕಾಲೇಜು ವಿದ್ಯಾರ್ಥಿಗಳಿಗಾಗಿ ಶ್ರೀರಾಮಕೃಷ್ಣ ವಿದ್ಯಾಶಾಲೆ, ಮೈಸೂರಿನಲ್ಲಿ ನಡೆಸಿದ ನಾಲ್ಕು ವಾರಗಳ ಆಧ್ಯಾತ್ಮಿಕ ಹಾಗೂ ನೈತಿಕ ಬೇಸಿಗೆ ಶಿಬಿರದಲ್ಲಿ ಭಾಗವಹಿಸುವ ಸೌಭಾಗ್ಯ ನನಗೆ ಸಿಕ್ಕಿತ್ತು. ಆಗ ಪೂಜ್ಯ ಸ್ವಾಮಿ ಹರ್ಷಾನಂದಜೀಯವರ ಸಂಪರ್ಕ ಹೆಚ್ಚು ದೊರೆಯಿತು. ಅವರಿಂದಲೂ ತುಂಬಾ ಪ್ರಭಾವಿತನಾಗಿದ್ದೆ. ನಂತರ 1965-67ರ ಸಮಯದಲ್ಲಿ ಬಾಲಕ ಸಂಘದಲ್ಲಿ ಸಿ ಮತ್ತು ಡಿ ತರಗತಿಗಳಿಗೆ ತರಗತಿಗಳನ್ನು ನಡೆಸುವ ಕೆಲಸ. ನನ್ನೊಂದಿಗಿದ್ದ ಬಾಲಕ ಸಂಘದ ಇತರ ಅನೇಕ ಸದಸ್ಯರು ಚದುರಿಹೋಗುವ ಕುರುಹುಗಳು ಕಾಣುತ್ತಿತ್ತು. ಇವರೆಲ್ಲರನ್ನು ಒಂದೆಡೆ ಸೇರಿಸುವ ಮತ್ತು ಬಾಲಕ ಸಂಘ ಸೇರಲು ವಯೋಮಿತಿ ಮೀರಿದ ಅನೇಕ ತರುಣ ಭಕ್ತರಿಗೆ ಒಂದು ಅವಕಾಶ ಕಲ್ಪಿಸಲು ಪ್ರಾರಂಭಿಸಿದ ಸಂಸ್ಥೆ 'ಶ್ರೀರಾಮಕೃಷ್ಣ ಸಂಘ'. ಇದನ್ನು ಮೊದಲು ಆರಂಭಿಸಿದ್ದು 1967ರಲ್ಲಿ, ಶ್ರೀ ಎನ್. ಆರ್. ಶ್ರೀಕಂಠಯ್ಯನವರ ಮನೆಯಲ್ಲಿ. ನಂತರ ಈ ವಿಷಯ ತಿಳಿದ ಆಶ್ರಮದ ಅಧ್ಯಕ್ಷರಾಗಿದ್ದ ಪೂಜ್ಯ ಸ್ವಾಮಿ ಪ್ರಬುದ್ಧಾನಂದರು, ಆಶ್ರಮದಲ್ಲಿಯೇ ಎಲ್ಲಾ ಚಟುವಟಿಕೆಗಳನ್ನು ಮುಂದುವರೆಸುವ ಆವಶ್ಯಕತೆಯನ್ನು ನನ್ನೊಂದಿಗೆ ದೀರ್ಘವಾಗಿ ಚರ್ಚಿಸಿ, ಆಶ್ರಮದಲ್ಲಿ ಎಲ್ಲಾ ಸೌಕರ್ಯಗಳನ್ನು ಮಾಡಿಕೊಟ್ಟರು. ನಮ್ಮ ಸಂಘಕ್ಕಾಗಿ Garden Hall (ಹಿಂದಿನ ಪ್ರಾರ್ಥನಾ ಮಂದಿರ) ಸ್ಥಳಾವಕಾಶ ಮಾಡಿಕೊಟ್ಟರು. ಒಂದು Godrej ಅಲ್ಮೇರಾ ಸಹ ತರಿಸಿ ಕೊಟ್ಟರು. ನಮ್ಮ ಸಂಘದ ಉದ್ದೇಶಗಳು, ಕಾರ್ಯಕ್ರಮಗಳು, ನಿಯಮಗಳು ಇವನ್ನು ತಯಾರಿಸಿ ತೋರಿಸಿದಾಗ ಸೂಕ್ತ ಸಲಹೆಗಳನ್ನು ನೀಡಿ, ಆಶೀರ್ವದಿಸಿ, ಸೂಕ್ಷ್ಮವಾಗಿ ಎಲ್ಲವನ್ನೂ ಪರಿಶೀಲಿಸುತ್ತಿದ್ದರು. ಇವರು ನಮ್ಮ ಸಂಘಕ್ಕೆ ಮಾತೃಸ್ಥಾನದಲ್ಲಿದ್ದವರು ಎಂದರೆ ತಪ್ಪಾಗಲಾರದು. ಸಂಘವು ಉದಯವಾದಾಗ ಶ್ರೀರಾಮಕೃಷ್ಣ ಆಶ್ರಮ, ಬೆಂಗಳೂರಿನಲ್ಲಿದ್ದ ಶ್ರೀ ಶಕ್ತಿ ಚೈತನ್ಯರು (ಸ್ವಾಮಿ ಜಗದಾತ್ಮಾನಂದಜಿಯವರು) 9.9.1967ರಂದು ಬರೆದ ಪ್ರೋತ್ಸಾಹದಾಯಕ ಪತ್ರದ ವಿವರ ಹೀಗಿದೆ. "ನೀವುಗಳೆಲ್ಲಾ ಸೇರಿ ಶ್ರೀಗುರುಮಹಾರಾಜರ ಹೆಸರಿನಲ್ಲಿ ಹೊಸದಾಗಿ ಸಂಘ ಕಟ್ಟಿದ್ದೀರೆಂದು ಕೇಳಿ ತುಂಬಾ ಸಂತೋಷಪಟ್ಟೆ. ಶ್ರೀಗುರುಮಹಾರಾಜರ ಮತ್ತು ಸ್ವಾಮಿ ವಿವೇಕಾನಂದರ ಉದಾತ್ತ ಆದರ್ಶಗಳನ್ನು ಅರ್ಥಮಾಡಿಕೊಂಡು ಅದನ್ನು ಅನುಸರಿಸಲು ಪ್ರಯತ್ನ ಮಾಡುತ್ತ, ಯುವಜನರಿಗೆ ಅದರ ಮಹತ್ತ್ವವನ್ನು ಮೆಲ್ಲಮೆಲ್ಲನೆ ಮನಮುಟ್ಟಿಸುವಂತೆ ತಿಳಿಸುವುದು ಅತ್ಯಂತ ಶ್ರೇಷ್ಠ ಕಾರ್ಯ — ಭಗವಂತನಿಗೆ ಪ್ರಿಯವಾದ ಕಾರ್ಯ ಎಂದು ನಾನು ನಂಬಿದ್ದೇನೆ. ಇದು ವೈಯಕ್ತಿಕ ಹಾಗೂ ಸಾಮಾಜಿಕ ಅಭ್ಯುದಯಕ್ಕೆ ತಳಹದಿ. ನಮ್ಮ ದೇಶದ ಧರ್ಮ, ಸಂಸ್ಕೃತಿ ಉಳಿಯುವುದು, ಅಳಿಯುವುದು ಯುವಕರು ನೆಚ್ಚಿಕೊಂಡ ಆದರ್ಶಗಳನ್ನೇ ನೆಚ್ಚಿಕೊಂಡಿದೆ."

ಎಲ್ಲರ ಪ್ರೋತ್ಸಾಹ ಮಾರ್ಗದರ್ಶನದಲ್ಲಿ ರೂಪುಗೊಂಡ ಈ ಸಂಸ್ಥೆ ಸದಾ ಭಗವಂತನ ಕೃಪೆಗೆ ಪಾತ್ರವಾಗಿರುವುದರಲ್ಲಿ ಆಶ್ಚರ್ಯವೇನಿದೆ? ಆಶ್ರಮದಲ್ಲಿ ನಮ್ಮ ಕಾರ್ಯಕ್ರಮಗಳು ಬಿರುಸಿನಿಂದ ಶುರುವಾಯಿತು. ಪ್ರತಿ ಭಾನುವಾರ ಸಂಜೆ ಐದು ಗಂಟೆಗೆ ಸಭೆ ಸೇರುವುದು. ಆರತಿ, ಭಜನೆ, ಶ್ರೀರಾಮಕೃಷ್ಣ ವಚನವೇದದಿಂದ ವಾಚನ, ಆಗಾಗ್ಗೆ ಸ್ವಾಮಿಗಳು, ಹಿರಿಯರಿಂದ ಉಪನ್ಯಾಸಗಳು ಹೀಗೆ ಆರಂಭ. ನಂತರ ದಿವ್ಯತ್ರಯರ ಜೀವನ ಮತ್ತು ಸಂದೇಶಗಳು, ನಮ್ಮಂತೆ ಎಲ್ಲಾ ಮಕ್ಕಳಿಗೂ

ಮುಟ್ಟಬೇಕೆಂಬ ಉದ್ದೇಶದಿಂದ ಪ್ರೌಢಶಾಲಾ ಮಕ್ಕಳಿಗಾಗಿ ಪ್ರಬಂಧ ಸ್ಪರ್ಧೆ ಏರ್ಪಡಿಸುವ ಕಾರ್ಯಕ್ರಮ. ಮೊದಲ ಸ್ಪರ್ಧೆಗೆ ವಿಷಯವನ್ನು ಅನುಮೋದಿಸಿದವರು ಸ್ವಾಮಿ ಪ್ರಬುದ್ಧಾನಂದಜಿಯವರು. 1968ರ ಪ್ರಬಂಧಸ್ಪರ್ಧೆಗೆ ವಿಷಯ ನೀಡಿದವರು ಸ್ವಾಮಿ ಹರ್ಷಾನಂದಜಿಯವರು. ಪ್ರಬಂಧಸ್ಪರ್ಧೆಯ ಯಶಸ್ಸು ಎಲ್ಲರಿಗೂ ಒಂದು ರೀತಿಯ ಆನಂದ ತಂದಿತು. ಇದು ಒಂದು ನಿಯಮಿತ ಕಾರ್ಯಕ್ರಮವಾಯಿತು. ಇದರೊಂದಿಗೆ ಮತ್ತೊಂದು ಕಾರ್ಯಕ್ರಮ ಒಂದು ವಾರ್ಷಿಕ ಪತ್ರಿಕೆ ಹೊರತರುವುದೆಂದು ಯೋಜಿಸಲಾಯಿತು. ಅದಕ್ಕೆ 'ಸಮನ್ವಯ' ಎಂದು ಹೆಸರಿಡಲಾಯಿತು. ಈ ಹೆಸರನ್ನು ಅನುಮೋದಿಸಿದವರೂ ಸ್ವಾಮಿ ಪ್ರಬುದ್ಧಾನಂದಜೀಯವರು. ಈ ಪತ್ರಿಕೆಯ ಸಂಪಾದಕ ಮಂಡಳಿಯ ಅಧ್ಯಕ್ಷರು ಸ್ವಾಮಿ ಸುರೇಶಾನಂದಜೀಯವರು. ಹೆಚ್ಚಿನ ಜವಾಬ್ದಾರಿ ಶ್ರೀ ಎಚ್. ಎನ್. ಸೋಮಸುಂದರಂರವರದು. ಪತ್ರಿಕೆಗೆ ಜಾಹೀರಾತು ಒದಗಿಸುವ ಹೆಚ್ಚಿನ ಕೆಲಸ ಶ್ರೀ ಬಿ. ಎಸ್. ಸುಬ್ರಮಣ್ಯರವರು. ಈ ಸಮಯದಲ್ಲಿ ಕಿಟ್ಟಿ ಮೇಷ್ಟು ಬೆಂಗಳೂರಿನಲ್ಲಿರಲಿಲ್ಲ. ಮದರಾಸಿನಲ್ಲಿ ಕಾರ್ಯ ನಿರ್ವಹಿಸುತ್ತಿದ್ದರು. ಆದರೂ ಇವರನ್ನು ಸಂಪಾದಕ ಮಂಡಳಿಗೆ ಸೇರಿಸಿಕೊಳ್ಳುವ ನನ್ನ ಪ್ರಯತ್ನ ಫಲಿಸಲಿಲ್ಲ. ಏಕೆಂದರೆ ಅವರು ದಿನಾಂಕ 24.9.1967ರ ಪತ್ರದಲ್ಲಿ ಹೀಗೆ ಬರೆದಿರುತ್ತಾರೆ:

"I do not know how for an Annual Magazine would serve your purpose. You heve to have a more frequent publication if you want to spread a message; it has to be a monthly or atleast a quarterly. Then, I know how difficult it is to run a good quality journal. It takes a lot of money and plenty of efforts. It will be worthwhile doing it, but wonder if you can do it. Now, I do not think, I should become a member of the Magazine Committee – I would be only ornamental, since I sit here 200 miles away from the scene of your activities. You should take people from Bangalore for this work.

ನಂತರ ರಾಮಕೃಷ್ಣ ಸಂಘದ ಬಗ್ಗೆ ಬರೆಯುತ್ತಾ "When I attended a meeting of your sangha last time, I had a peculiar feeling – you were just doing the same things that were being done by the Balaka Sangha and the Ashrama in their meeting and in a much narrower sphere and much less effectively. Even then, I was thinking that you should think of doing something different, to reach a different set of people, if you want a justification for the existence of a sangha. Now this Magazine idea is good if only you can work it properly. I hope you will succeed in your efforts."

ಈ ಪತ್ರದ ವಿಷಯ ಸ್ವಲ್ಪ ಯೋಚನೆ ಮಾಡುವಂತೆ ಮಾಡಿತು. ಮುಂದೆ ಶಾಲೆಯ ಯೋಚನೆಗೂ ಸ್ವಲ್ಪಮಟ್ಟಿಗೆ ಕಾರಣವಾಯಿತು.

ಎಲ್ಲರ ಪ್ರೋತ್ಸಾಹ, ಆಶೀರ್ವಾದಗಳನ್ನು ಹೊತ್ತು ಸಂಘದಿಂದ ನಾಲ್ಕು ವಾರ್ಷಿಕ 'ಸಮನ್ವಯ' ಪತ್ರಿಕೆಗಳು ಪ್ರಕಟವಾದವು. ಆಶ್ರಮದ ವಾರ್ಷಿಕೋತ್ಸವದ ಸಮಯದಲ್ಲಿ ಭರದಿಂದ ಮಾರಾಟವೂ ಆದವು. ಉತ್ತಮ ಲೇಖನಗಳು ಪ್ರಕಟವಾಗಿವೆ. ನಾಲ್ಕು ಪ್ರತಿಗಳೂ ಶಾಲೆಯಲ್ಲಿ ಓದಲು ಲಭ್ಯ. ಇಷ್ಟುಹೊತ್ತಿಗೆ 1970ರಲ್ಲಿ ನಮಗೆ ಪೂರ್ಣ ಬೆಂಬಲವಾಗಿದ್ದ ಪೂಜ್ಯ ಸ್ವಾಮಿ ಪ್ರಬುದ್ಧಾನಂದಜಿಯವರು ಅಮೇರಿಕದ ಸ್ಯಾನ್‌ಫ್ರಾನ್ಸಿಸ್ಕೊಗೆ ಬೇಲೂರು ಮಠದಿಂದ ನಿಯೋಜಿಸಲ್ಪಟ್ಟರು.

1970ರ ಪ್ರಬಂಧ ಸ್ಪರ್ಧೆಯ ಏರ್ಪಾಡಿನ ಸಂದರ್ಭದಲ್ಲಿ ಒಂದು ಹೊಸ ಯೋಜನೆ ಬಂತು. ಅದೇ ಸ್ವಾಮಿ ವಿವೇಕಾನಂದರ 'Man Making Education' ಆದರ್ಶದ ಒಂದು ಶಾಲೆಯನ್ನು ಏಕೆ ಸ್ಥಾಪಿಸಬಾರದು. ಬಾಲ್ಯಾವಸ್ಥೆಯಲ್ಲಿಯೇ ಮಕ್ಕಳಿಗೆ ಸಾಮಾನ್ಯ ವಿದ್ಯಾಭ್ಯಾಸ

ದೊಂದಿಗೆ ನಾವು ಕಲಿತ ಆದರ್ಶಗಳ ಪರಿಚಯ ಮಾಡಿಸುವ, ದೇಶದ ಉತ್ತಮ ಪ್ರಜೆಗಳಾಗಲು ನಮ್ಮ ಧರ್ಮ ಮತ್ತು ಸಂಸ್ಕೃತಿಗಳ ಪರಿಚಯ ನೀಡುವ ಯೋಚನೆ ಬರುತ್ತಿದ್ದಂತೆಯೇ ವಿದ್ಯಾ ಇಲಾಖೆಯಲ್ಲಿ ಪೂರ್ಣಾವಧಿ ಸೇವೆ ಸಲ್ಲಿಸಿ ನಿವೃತ್ತರಾಗಿ, ಖಾಸಗಿ ಶಾಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಡಿ. ದೋಂಡುರಾವ್‌ರವರ ಪರಿಚಯವಾಯಿತು. ಅವರೊಂದಿಗೆ ಚರ್ಚಿಸಿದಾಗ ಅವರು ಅತ್ಯಂತ ಉತ್ಸಾಹಿತರಾಗಿ ಮಾರನೆಯ ದಿವಸವೇ ಆಶ್ರಮಕ್ಕೆ ಬಂದು ಚರ್ಚಿಸಿ ಕಾರ್ಯಪ್ರವೃತ್ತರಾದರು.

ಈ ಹಂತದಲ್ಲಿ ಶ್ರೀರಾಮಕೃಷ್ಣ ಸಂಘದ ಚಟುವಟಿಕೆಗಳು ಸ್ವಲ್ಪ ವಿಸ್ತಾರಗೊಂಡಿದ್ದು, ಆಶ್ರಮದಲ್ಲಿಯೇ ಮುಂದುವರಿಯುವುದು ಕಷ್ಟಸಾಧ್ಯವೆಂಬ ವಾತಾವರಣ ಉಂಟಾಯಿತು. ಇಷ್ಟುಹೊತ್ತಿಗೆ ಶಾಲೆಯನ್ನು ಪ್ರಾರಂಭಿಸಬೇಕೆಂಬ ಮಾನಸಿಕ ನಿರ್ಣಯ ಕೈಗೊಳ್ಳಲಾಗಿತ್ತು. ಶಾಲೆಯ ಆರಂಭದ ಬಗ್ಗೆ ಎಲ್ಲಾ ಹಿರಿಯರ ಅಭಿಪ್ರಾಯವನ್ನು ಕೋರಿ ಪತ್ರ ಬರೆದೆ. ಮಿಶ್ರ ಪ್ರತಿಕ್ರಿಯೆಗಳು ಬಂದವು.

ಪೂಜ್ಯ ಸ್ವಾಮಿ ಪ್ರಬುದ್ಧಾನಂದಜಿಯವರು ಸ್ಯಾನ್ ಫ್ರಾನ್ಸಿಸ್ಕೊದಿಂದಲೇ ನಮಗೆ ಪ್ರೇರಕಶಕ್ತಿಯಾಗಿದ್ದರು. ದಿನಾಂಕ 22.9.1970ರಲ್ಲಿ ಅವರ ಬರೆದ ಪತ್ರದಲ್ಲಿ "I greatly appreciate your spirit. ಶ್ರೀಗುರು ಮಹಾರಾಜರೇ ಎಲ್ಲವನ್ನೂ ಮಾಡಿಸುತ್ತಿದ್ದಾರೆ. ಅವರ ಬೆಂಬಲ ಸದಾ ಕಾಲದಲ್ಲಿಯೂ ನಮ್ಮೊಡನೆ ಇದ್ದೇ ಇರುವುದು" Yes, that is the way. With a prayerful mood and a spirit of self surrender, we would go on working hard continuously, taking whatever outside help we are able to get. You have sincerity and are prepared to face difficulties. So, go on boldly depending on the Lord.

"Your essay competition is a phenomenal success. That shows what our youngmen can do if they mind. I was so happy to read the report sent by Shankara. May Sri Gurumaharaj and Swamiji inspire, guide, bless each one of you to spread this message from town to town, village to village, nay, from door to door."

ಬೆಂಗಳೂರಿನಿಂದ ಬಿಹಾರದ ದೇವಘರ್ ರಾಮಕೃಷ್ಣ ಮಿಷನ್ ವಿದ್ಯಾಪೀಠಕ್ಕೆ ನಿಯೋಜಕರಾಗಿದ್ದ ಪೂಜ್ಯ ಸ್ವಾಮಿ ದೇವರೂಪಾನಂದಜಿ 19.9.1970ರ ಪತ್ರದಲ್ಲಿ ಈ ರೀತಿ ಹುರಿದುಂಬಿಸುತ್ತಾರೆ:

"ಶ್ರೀರಾಮಕೃಷ್ಣ ಸಂಘದ ಕಾರ್ಯಕ್ರಮಗಳ ಯಶಸ್ಸು, ಯುವಜನಾಂಗಕ್ಕೆ ಸಲ್ಲಿಸುತ್ತಿರುವ ಸೇವೆ ಅತ್ಯಂತ ಶ್ಲಾಘನೀಯ. ಶ್ರೀಗುರುಮಹಾರಾಜರ ಪರಮಕೃಪೆಯು ಸಂಘವನ್ನು ರಕ್ಷಿಸುತ್ತದೆ. ಹೆದರಬೇಕಿಲ್ಲ. ಜೀವನದಲ್ಲಿ ಧೀರನಾಗಿ ಬಾಳಬೇಕು. ಪರಮಾತ್ಮನಲ್ಲಿ ಅನನ್ಯ ಶ್ರದ್ಧೆ ಮತ್ತು ಭಕ್ತಿಯಿಂದ ಪ್ರಾರ್ಥಿಸು."

ಶಾಲೆಯ ಆರಂಭಕ್ಕೆ ಸಂಬಂಧಪಟ್ಟಂತೆ ಪೂಜ್ಯ ಸ್ವಾಮಿ ಪ್ರಬುದ್ಧಾನಂದರು ದಿನಾಂಕ 2.10.1970ರ ಪತ್ರದಲ್ಲಿ "Your idea of starting a school to impart 'Man Making Education' to the young boys is very good. Certainly that is one of the best forms of service. I give below a few thoughts that came to my mind regarding plan.

In order to give that kind of education you have to start a High School. Middle School boys are too young or you should have a combined middle and High School. For this you need a few really dedicated workers. Though in the beginning there will be enthusiasm, after sometime it becomes difficult to get sincere people. Also you may have to depend upon some others who are not

interested with the spirit of service. A day may come when the Govt. will have a hand even in the selection of teachers. You can't easily remove an unwanted person. The Govt. or a politician intervenes and almost always the wrong doer wins using his 'influence'. Your difficulty will be that you will not be able to stoop so low as the other men.

Can any service be rendered to our boys in the field of education, without involving yourself in the whirlpool I have mentioned above!

Please think over. Consult also those orgainsers of schools who are working in this line. Now probably I have given you only the dark side of the issue. I am not discouraging you, but am showing you one side. As you know I dont have first hand experience, what I have written, was gathered from different people working in the field of education.

Whatever decision you take after considering all pros and cons, will have my best wishes and prayers."

ಹಾಲಿವುಡ್ ಕೇಂದ್ರದಿಂದ ಬಾರತಕ್ಕೆ ಹಿಂತಿರುಗಿ ಬಂದು ಚಂಡೀಘಡ ಆಶ್ರಮದ ಮುಖ್ಯಸ್ಥರಾಗಿದ್ದ ಪೂಜ್ಯ ಸ್ವಾಮಿ ಶಾಸ್ತ್ರಾನಂದರು ದಿನಾಂಕ 1.10.70ರ ಪತ್ರದಲ್ಲಿ "Delighted to learn from your letter the success of your essay competition. If you feel confident of running the 'Man Making' High School, go ahead. But you have to have with you atleast 2-3 of dedicated dependable friends who will be your life-long colleagues – and you must have a large number of students. Then it can be a success."

ಬೇಲೂರು ಮಠದಿಂದ ಪೂಜ್ಯ ಸ್ವಾಮಿ ಹರ್ಷಾನಂದಜಿಯವರು ಬರೆದಿದ್ದರು (ಅಕ್ಟೋಬರ್, 15, 1970) "I am rather apprehensive about your project for a new school! Though the idea is good there are several practical difficulties:

Since your school cannot be an isolated affair and has to be part and parcel of the general education system, being affiliated to the Department of Public Instruction, all your energy will be taken away in maintaining that curriculum. If you start with your own ideas nobody will come to your school.

The financial commitment is too much and will cause you a lot of worry and sap your enthusiasm. It is easy to start things but difficult to sustain them.

So think hundred times before jumping! On the other hand, I advocate that you young men can organise ಬಾಲಕ ಸಂಘ's in several parts of the city! You can try to organise them in some private schools also with the help of their management."

ಪೂಜ್ಯ ಸ್ವಾಮಿ ಸುರೇಶಾನಂದಜಿಯವರು ಚಂಡೀಘಡ ಕೇಂದ್ರದಿಂದ 28.9.70ರಂದು ಹೀಗೆ ತಿಳಿಸಿದ್ದರು. "If what I say is ruled out, you can think of going ahead with your plans. Certainly you have the creative ideas and executive ability to take up such a

project. You say you are already aware of all the difficulties, funds, friends etc., etc., You may not be able to executive any of your ideas for quite a few years because of these things. I mean funds etc., There will be many disillusionments, heart burnings etc., So called friends also may desert. It means money, position etc., for them. With all that, it is not impossible. There will be happy surprises also. Anyhow dont take any hasty steps. Think over the matter carefully."

ಅನಂತರ ಶಾಲೆಯ ಪ್ರಾರಂಭಕ್ಕೆ ಅಕ್ಟೋಬರ್ 31ರೊಳಗೆ ಅರ್ಜಿ ಸಲ್ಲಿಸಬೇಕಾಗಿದ್ದರಿಂದ ಶ್ರೀ ಡಿ. ದೋಂಡುರಾವ್‌ರವರ ಅಧ್ಯಕ್ಷತೆಯಲ್ಲಿ 'ಸ್ವಾಮಿ ವಿವೇಕಾನಂದ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಸಂಸ್ಥೆ' ಎಂಬ ಹೆಸರಿನಲ್ಲಿ ನಮ್ಮ ಸರ್ವೆಯರ್ ಸ್ಟ್ರೀಟ್ ಬಾಡಿಗೆ ಮನೆಯ ವಿಳಾಸದಲ್ಲಿ Registrar of Societies ಕಛೇರಿಯಲ್ಲಿ ಸಂಸ್ಥೆಯನ್ನು ನೋಂದಾಯಿಸಲಾಯಿತು. ನಮ್ಮಲ್ಲಿದ್ದ ಹಣವೆಂದರೆ ಕೇವಲ 2-3 ಸಾವಿರ ರೂ.ಗಳು. ಅದು ಸಮನ್ವಯ ಪತ್ರಿಕೆ ಪ್ರಕಟಣೆಯಿಂದ ಬಂದ ಹಣ. ಇದೇ ಬಂಡವಾಳದಲ್ಲಿ ರೂ. 1000/- Stability Fund ಕಟ್ಟಿದೆವು. ಹೊಸ ಶಾಲೆಗಳಿಗೆ ಪರವಾನಗಿ ಪಡೆಯುವುದು ಸ್ವಲ್ಪ ಕಷ್ಟದ ಕೆಲಸವೇ ಆಗಿತ್ತು. ಹೆಚ್ಚಿನ ಶಾಲೆಗಳಿಗೆ ಮಂಜೂರಾತಿ ನೀಡುತ್ತಿರಲಿಲ್ಲ. ವಿದ್ಯಾರ್ಥಿಮಂದಿರದಲ್ಲಿದ್ದ Finance Secretary ಆಗಿದ್ದ ಭರತ್‌ರವರ ಸಹಾಯದಿಂದ ಸಾಧ್ಯವಾಯಿತು. ನಾವು ಅದಕ್ಕೆ ಮುಂಚೆ ವಿಧಾನಸೌಧದಲ್ಲಿ ವಿದ್ಯಾ ಇಲಾಖೆ ಕಾರ್ಯದರ್ಶಿಗಳಾಗಿದ್ದ ಶ್ರೀ ರಾಮಚಂದ್ರನ್‌ರವರ ಮನೆಯಲ್ಲಿ ಭೇಟಿ ಮಾಡಿ ವಿನಂತಿಸಿದ್ದೆವು. ಸ್ವಾಮಿ ಪ್ರಬುದ್ಧಾನಂದಜಿಯವರು ಮೈಸೂರಿನಲ್ಲಿದ್ದ ಡಾ|| ಪ್ರಭುಶಂಕರ್‌ರವರಿಗೆ ಪತ್ರ ಬರೆದು, ಶ್ರೀರಾಮಚಂದ್ರನ್‌ರವರ ಗಮನಕ್ಕೆ ವಿಷಯ ತರಬೇಕೆಂದು ನಮ್ಮ ಪರವಾಗಿ ಕೋರಿದ್ದರು. ಅದರಂತೆ ಡಾ|| ಪ್ರಭುಶಂಕರ್‌ರವರು ಕ್ರಮ ಕೈಗೊಂಡು ಸ್ವಾಮಿ ಪ್ರಬುದ್ಧಾನಂದಜೀಯವರಿಗೆ ವರದಿ ಮಾಡಿದ್ದ ವಿಷಯವನ್ನು ಸ್ವಾಮೀಜಿಯವರು ತಮ್ಮ 5.4.1971ರ ಪತ್ರದಲ್ಲಿ ಹೀಗೆ ತಿಳಿಸಿರುತ್ತಾರೆ. "ನಿಮ್ಮ ಕಾಗದ ಬಂದ ಕೂಡಲೇ ಬೆಂಗಳೂರಿಗೆ trunk call ಮಾಡಿ ಶ್ರೀ ರಾಮಚಂದ್ರನ್ ಅವರೊಂದಿಗೆ ಮಾತನಾಡಿದೆ. ಅವರು "ಖಂಡಿತ ಆಗಲಿ ಮಾಡಿಸುತ್ತೇನೆ. ಇಲ್ಲದಿದ್ದರೆ ಭರತ್ ಬಿಡುತ್ತಾರೆಯೇ? ಎಂದರು. ಸಂಘದ ಹುಡುಗರು ಇದರ ಕಾರ್ಯಭಾರ ಹೊತ್ತವರು — ಶ್ರೀ ರಾಮಚಂದ್ರನ್ ಅವರನ್ನು ನೋಡಿ ಎಲ್ಲವನ್ನೂ ಅವರಿಗೆ ವಿವರಿಸುವಂತೆ ಬರೆಯಿರಿ." ಇದಾದ ನಂತರ ನಾವು ಕೆಲವರು ಅವರನ್ನು ಭೇಟಿ ಮಾಡಿದ್ದೆವು. ಕೆಲಸ ಸುಗಮವಾಯಿತು. ಆ ವರ್ಷ ಬೆಂಗಳೂರಿನಲ್ಲಿ ಮೊದಲ ಹಂತದಲ್ಲಿ ಹೊಸ ಶಾಲೆ ಪ್ರಾರಂಭಿಸಲು ಅನುಮತಿ ದೊರೆತದ್ದು ನಮ್ಮ ಶಾಲೆಗೆ ಮಾತ್ರ. ಇದು ಸಾಧ್ಯವಾದದ್ದು ಅಮೇರಿಕದಲ್ಲಿದ್ದ ಪೂಜ್ಯ ಸ್ವಾಮಿ ಪ್ರಬುದ್ಧಾನಂದರ ನೆರವಿನಿಂದ. ಶಾಲೆಯ ಪ್ರಾರಂಭಕ್ಕೆ ಮೂರು ತಿಂಗಳ ಮುಂಚಿತವಾಗಿ ಸಂಘಕ್ಕಾಗಿ ಹನುಮಂತನಗರದಲ್ಲಿ ಒಂದು ರೂಮು ಬಾಡಿಗೆಗೆ ಹಿಡಿದೆವು. ರೂ. 35 ಬಾಡಿಗೆ. ಈ ಸಂದರ್ಭದಲ್ಲಿಯೂ ಸ್ವಾಮಿ ಪ್ರಬುದ್ಧಾನಂದರು ಕಿಟ್ಟಿ ಮೇಷ್ಟ್ರ ಮೂಲಕ 70 ರೂ.ಗಳನ್ನು ಕಳುಹಿಸಿಕೊಟ್ಟಿದ್ದರು. ಮೂರು ತಿಂಗಳ ನಂತರ ಶಾಲೆಗೆ ಒಂದು ಬಾಡಿಗೆ ಕಟ್ಟಡ ಡಾ|| ಸೂರ್ಯನಾಥ ಕಾಮತ್‌ರ ಹೊಸ ಮನೆ ಪಡೆದೆವು. ಇದಕ್ಕಾಗಿ ಪ್ರೊ. ಕೆ. ಸಂಪದ್‌ಗಿರಿರಾವ್‌ರವರ ಮನೆಗೆ ನಾನು ಮತ್ತು ಸೋಮಸುಂದರಂ ಭೇಟಿ ಇತ್ತು, ಅವರ ಆಶೀರ್ವಾದ ಪಡೆದು ಅವರ ಮೂಲಕ ಕಾಮತ್‌ರನ್ನು ವಿನಂತಿಸಿದ್ದೆವು. ನಂತರ ಒಂದು ವರ್ಷದ ನಂತರ ಇನ್ನೊಂದು ಮನೆಗೆ ವರ್ಗಾಯಿಸಿದೆವು. ಶ್ರೀರಾಮಕೃಷ್ಣ ಸಂಘದ ಎಲ್ಲಾ ಚಟುವಟಿಕೆಗಳು ಶಾಲೆಯಲ್ಲಿಯೇ ಮುಂದುವರೆಯಿತು. ಸ್ವಾಮಿ ಪುರುಷೋತ್ತಮಾನಂದಜಿಯವರು, ಆಶ್ರಮದಿಂದ ನಾವು ಸಂಘದಲ್ಲಿ ಉಪಯೋಗಿಸುತ್ತಿದ್ದ ಹಲವು ಸಾಮಾನುಗಳ ಜೊತೆಗೆ ಕೆಲವು ಪೀಠೋಪಕರಣಗಳನ್ನೂ ನಮಗೆ ಒದಗಿಸಿದರು. ಹೀಗೆ ಶಾಲೆ 1971ರ ಜೂನ್‌ನಿಂದ ಅಸ್ತಿತ್ವಕ್ಕೆ ಬಂತು. ಪೂಜ್ಯ

ಸ್ವಾಮಿ ಪ್ರಬುದ್ಧಾನಂದರು 13 ಜುಲೈ 1971ರ ಪತ್ರದಲ್ಲಿ ಹೀಗೆ ಬರೆದರು: "Exceedingly happy to learn of the inauguration of your school. It is good and wise decision that you are having one of you (Shankar) in your staff."

"In mysterious ways the Lord is solving your problems. But he makes us work, but sometimes makes us anxious. It is good for us. Trust your financial problem also will be solved atleast temporarily before long."

ಪೂಜ್ಯ ಸ್ವಾಮಿ ಶಾಸ್ತ್ರಾನಂದಜಿಯವರು ದಿನಾಂಕ 16.6.1971ರಲ್ಲಿ ಈ ರೀತಿ ಹಾರೈಸಿದರು. "Trust your school project and adventure is coming along well. I think of it and pray for its success."

ನಂತರ ಕೆಲವು ದಿನಗಳಲ್ಲಿ ಪೂಜ್ಯ ಸ್ವಾಮಿ ಸುರೇಶಾನಂದಜಿಯವರು ಶಾಲೆಗೆ ಕೆಲವು ಭಕ್ತರ ಮೂಲಕ ಸ್ವಲ್ಪ ಧನಸಹಾಯ ಒದಗಿಸಿದರು. ಒಬ್ಬರಿಂದ ಸಾಲವನ್ನು ಪಡೆದಿದ್ದೆವು. ನಂತರ ಕೆಲವು ವರ್ಷಗಳ ನಂತರ ಸಹಾಯವಾಗಿ ಪರಿವರ್ತಿತವಾಯಿತು.

ಜೂನ್ 16, 1971ರ ಪತ್ರಮುಖೇನ ಶ್ರೀರಾಮಕೃಷ್ಣ ಮಠ ಮತ್ತು ಮಿಷನ್‌ನ ಆಗಿನ ಅಧ್ಯಕ್ಷರಾಗಿದ್ದ ನನ್ನ ಗುರುಗಳಾದ ಪರಮಪೂಜ್ಯ ಸ್ವಾಮಿ ವೀರೇಶ್ವರಾನಂದಜಿಯವರು ಬೇಲೂರು ಮಠದಿಂದ ಬೆಂಗಳೂರು ಆಶ್ರಮದ ಅಧ್ಯಕ್ಷರಾಗಿದ್ದ ಪೂಜ್ಯ ಸ್ವಾಮಿ ಆದಿದೇವಾನಂದಜಿಯವರಿಗೆ ಕಳುಹಿಸಿದ್ದ ಸಂದೇಶ ಹೀಗಿದೆ. **"I am glad to hear that Sri Ramakrishna Sangha, Bangalore has started a high school, Swami Vivekananda Vidya Shala for boys and girls. I hope it would implement the educational ideals of Swami Vivekananda.**

**May Sri Ramakrishna be gracious to the school, the students and members of the staff."**

ಪ್ರಾರಂಭದ ನಂತರ ಪ್ರತಿಯೊಂದು ಹಂತದಲ್ಲಿಯೂ ನಮ್ಮನ್ನು ಪೂಜ್ಯ ಪ್ರಬುದ್ಧಾನಂದಜಿಯವರು ವಿಚಾರಿಸಿಕೊಳ್ಳುತ್ತಿದ್ದರು. ಒಂದು ವರ್ಷದ ನಂತರ ನನ್ನ ವಿದ್ಯಾರ್ಹತೆ ಶಾಲೆಗೆ ಪ್ರಯೋಜನವಿಲ್ಲದ್ದರಿಂದ ನಾನು ಸರಕಾರಿ ಕೆಲಸಕ್ಕೆ ಸೇರಿದೆ. ನನ್ನ ವೇತನದಲ್ಲಿ ತಲಾ ಶೇ. 25 ಭಾಗ ಶಾಲೆಗೆ, ನನ್ನ ಸ್ವಂತ ಖರ್ಚಿಗೆ, ಓಡಾಟಕ್ಕೆ ಹಾಗೂ ನಮ್ಮ ಮನೆಗೆ ಖರ್ಚಾಗುತ್ತಿತ್ತು. ಅನುದಾನ ಲಭ್ಯವಾಗುವವರೆಗೂ ಈ ರೀತಿ ನಡೆಯಿತು. ಆಮೇಲೆ ನಾನಾ ಕಡೆಯಿಂದ ಸ್ವಲ್ಪ ಸ್ವಲ್ಪ ಸಹಾಯ ಒದಗಿ ಬರುತ್ತಿತ್ತು. ನಮ್ಮ ಉಪಾಧ್ಯಾಯವರ್ಗದವರು ಮೊದಲ ಐದು ವರ್ಷಗಳು ಕೇವಲ 50 ರಿಂದ 150 ರೂ. ಪಡೆದು ಕಾರ್ಯನಿರ್ವಹಿಸಿದರು.

ದಿನಾಂಕ 28.1.1972ರಂದು ಪೂಜ್ಯ ಸ್ವಾಮಿ ಪ್ರಬುದ್ಧಾನಂದಜಿಯವರು ಬರೆದ ಪತ್ರದ ಉದ್ಧರಿತ ಭಾಗ ಹೀಗಿದೆ: "You are working in difficult circumstances. There are all inevitable situations for a dedicated worker. You have been facing all these with exemplary courage and determination. May the Lord grant you more and more tenacity to carry on in spite of obstacles. As problems come from one side, helps and solutions also comes from other side. You are experiencing this. I often think of your school and some wild imaginations cross my mind regarding some assistance to you. I have to wait for quite sometime to do something from here.

I hear that Shankar has been working hard for the school. It is so nice that during your absence he could manage single handed and that very well. The Lord provides the needed capacity when one is sincere.

1989ರ ವರ್ಷದವರೆಗೆ ಕಾಲಕಾಲಕ್ಕೆ ಪತ್ರ ಬರೆದು ಸೂಕ್ತ ಮಾರ್ಗದರ್ಶನ ನೀಡುತ್ತಿದ್ದರು. ಶಾಲೆಗೆ 1980 ರಲ್ಲಿ C.I.T.B. ನಿಂದ ನಿವೇಶನ ಮಂಜೂರಾದಾಗ ಅಮೇರಿಕದ ಭಕ್ತರೊಬ್ಬರ ಮೂಲಕ ಧನಸಹಾಯ ಒದಗಿಸಿದರು.

ಶಾಲೆಯು ಆರಂಭವಾದ ಐದು ವರ್ಷಗಳ ನಂತರ (29.1.1976) ಅವರು ಬರೆದ ಪತ್ರ ಹೀಗಿದೆ. "Well, the Lord is teaching you to depend on Him for doing his work. Infact you have been learning of this lesson ever since you began Sri Ramakrishna Sangha Work. You are carrying on with courage and confidence. Please continue in the same way. The Lord will send help in unexpected ways. You started this project under Swamiji's inspiration and he will surely continue to inspire you and your friends. Please congratulate Somasundaram on my behalf on his new project of distributing medicine to the needy. I shall also be glad to participate in this service programme.

ನಮ್ಮ ಶಾಲೆಗೆ ಸೈಟ್ ದೊರಕಿದ್ದರೂ ಕಟ್ಟಡಕ್ಕೆ ಹಣವಿರಲಿಲ್ಲ. ಈ ಸಮಯಕ್ಕೆ ಸರಿಯಾಗಿ ನಮ್ಮ ಕಿಟ್ಟಿ ಮೇಷ್ಟ್ರು 1982ರಲ್ಲಿ ತಮ್ಮ ಕೇಂದ್ರ ಸರ್ಕಾರದ ಕೆಲಸದಿಂದ ಸ್ವಯಂ ನಿವೃತ್ತಿ ಪಡೆದು ಬೆಂಗಳೂರಿಗೆ ಮರಳಿದರು. ನನಗಂತೂ ತುಂಬಾ ಸಂತೋಷವಾಯಿತು. ಎಲ್ಲಾ ಜವಾಬ್ದಾರಿಯನ್ನು ಅವರಿಗೆ ವಹಿಸಲು ತೀರ್ಮಾನಿಸಿದೆ. ನಾನು ಸೋಮಸುಂದರಂರವರನ್ನು ಕರೆದುಕೊಂಡು ಕೂಡಲೇ ಅವರ ಮನೆಗೆ ಹೋದೆ. ಮುಂದೇನು ಮಾಡಬೇಕೆಂದಿರುವಿರಿ ಎಂದು ಕೇಳಿದೆ. ಇನ್ನೂ ಏನೂ ನಿರ್ಧರಿಸಿಲ್ಲ ಎಂದರು. ತುಂಬಾ ಖುಷಿಯಾಯಿತು. ಶಾಲೆಯ ಮುಂದಾಳತ್ವವನ್ನು ವಹಿಸಿಕೊಳ್ಳಲು ಭಿನ್ನವಿಸಿದೆವು. ಸ್ವಲ್ಪ ಹಿಂಜರಿದರು. ಆದರೆ ಶ್ರೀ ಗುರುಮಹಾರಾಜರ ಇಚ್ಛೆಯೇ ಬೇರೆ ಇತ್ತು — ಈ ಶಾಲೆಯ ಅಭಿವೃದ್ಧಿಗಾಗಿಯೇ ಅವರನ್ನು ಕಳುಹಿಸಿದ್ದಾರೆಂದು ನಮ್ಮ ನಂಬಿಕೆ. ಕಡೆಗೂ ಒಪ್ಪಿದರು. ಮುಂದಿನ ಬೆಳವಣಿಗೆ ಎಲ್ಲರಿಗೂ ತಿಳಿದಿದೆ. ಕೂಡಲೇ ಕಾರ್ಯಪ್ರವೃತ್ತರಾದರು. 1984ರಲ್ಲಿ ಕಟ್ಟಡ ಪ್ರಾರಂಭಿಸಿದರು. ಸಿಮೆಂಟ್ ಹೊತ್ತ ಲಾರಿ ಬಂದಾಗ ಅವರೇ ಇಳಿಸಿಕೊಂಡರು. ಹಳೆಯ ಕಟ್ಟಡದಲ್ಲಿ ಶೇಖರಿಸಲಾಗಿತ್ತು. 1985ರಲ್ಲಿ ಪ್ರಥಮ ಹಂತದ ಕೆಲಸವಾಯಿತು. ನಂತರ ಹಣಸಹಾಯಕ್ಕಾಗಿ ಅಮೇರಿಕಾ ಪ್ರವಾಸಗಳನ್ನು ಕೈಗೊಂಡು, ಭಕ್ತರ ಮನೆಗಳಲ್ಲಿ ಭಜನೆ ಮಾಡಿ ಹಣ ಸಂಗ್ರಹಿಸಿದರು. ಶ್ರೀರಾಮಕೃಷ್ಣರ ಕೃಪಾಪೂರವೇ ಇವರ ಮೂಲಕ ಹರಿದುಬರುತ್ತಿದೆಯೇನೋ ಎಂದು ಭಾಸವಾಗುತ್ತಿತ್ತು. ಇವರು ಕಾರ್ಯದರ್ಶಿ ಸ್ಥಾನ ವಹಿಸಿಕೊಂಡ ನಂತರ ಡಾ. ಪಿ. ಎಸ್. ನಾರಾಯಣ ರಾವ್‌ರವರು 1987ರಲ್ಲಿ ಈ ಸಂಸ್ಥೆಯ ಅಧ್ಯಕ್ಷರಾಗಿ ನಮ್ಮೊಡನೆ ಜೊತೆಗೂಡಿದರು. ಅದ್ಭುತವಾಗಿ ಕೆಲಸಗಳು ಆಯಿತು. 'ಅನ್ನಪೂರ್ಣ ಯೋಜನೆ' ಬಂದಿತು. 'ಬಾಲ ವಿಕಾಸ ಕೇಂದ್ರ' ಸ್ಥಾಪಿತವಾಯಿತು. ಹಲವು ಪುಸ್ತಕಗಳು ಪ್ರಕಟವಾಯಿತು. ಸೋಮಸುಂದರಂ 'ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ'ದಲ್ಲಿ ಎಲೆಮರೆ ಕಾಯಿಯಂತೆ ಅದ್ಭುತವಾದ ಕೆಲಸವನ್ನು ಮಾಡಿದರು. ನಂತರ ಕಿಟ್ಟಿ ಮೇಷ್ಟ್ರು ಅಧ್ಯಕ್ಷರಾದರು. ಸೋಮಸುಂದರಂ ಕಾರ್ಯದರ್ಶಿ ಸ್ಥಾನ ತುಂಬಿದರು. ಈ ಅವಧಿಯಲ್ಲಿ ನಮ್ಮ ಬಿ. ಎಸ್. ಸುಬ್ರಮಣ್ಯಂ ಬ್ಯಾಂಕ್ ಕೆಲಸದಿಂದ ನಿವೃತ್ತರಾಗಿ ಬಂದು, ಕಿಟ್ಟಿಮೇಷ್ಟ್ರು, ಸೋಮಸುಂದರಂರವರ ಅನುಪಸ್ಥಿತಿಯಲ್ಲಿ ಶಾಲೆಯ ಎಲ್ಲಾ ಕೆಲಸಗಳನ್ನು ನೋಡಿಕೊಂಡರು. ಹೀಗೆ ನಾನಾ ಮೂಲಗಳಿಂದ ಪ್ರೇರಿತ ವ್ಯಕ್ತಿಗಳನ್ನೊಳಗೊಂಡು ಈ ಶಾಲೆ ಈ ಸ್ಥಿತಿ ಮುಟ್ಟಿದೆ. ಇನ್ನೂ ಆಗಬೇಕಾದದ್ದು ತುಂಬಾ ಇದೆ. ಭಗವಂತನ ಇಚ್ಛೆಗೆ ಬಿಡೋಣ. ❑

